**Government Oriental Library Series**

EDITED BY PANDITS UNDER THE SUPERVISION OF THE CURATOR, GOVERNMENT ORIENTAL LIBRARY, MYSORE.

**Kannada Section No. VI**

ಕುಮಾರವ್ಯಾಸಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

೩ನೆಯ ಸಂಪುಟ

## ಸಭಾಪರ್ವ

THE

# KARNATAKA MAHABHARATA

BY

KUMARAVYASA MAHAKAVI

**Volume III**

**SABHAPARVA**

EDITED BY

V. SYAMACHARYA

*Pandit, Govt. Oriental Library, Mysore*

PUBLISHED UNDER THE AUTHORITY OF THE GOVERNMENT OF HIS HIGHNESS THE MAHARAJA OF MYSORE

MYSORE

PRINTED AT THE GOVERNMENT BR[illegible] PRESS

1915

# ಅವತರಣಿಕೆ

---

ಈ ಪುಸ್ತಕವು ಕರ್ಣಾಟಕಮಹಾಭಾರತದ ಮೂರನೆಯ ಸಂಚಿಕೆಯಾಗಿ ಇರುವುದು. ಈ ಗ್ರಂಥಕಾರನಾದ ಕುಮಾರವ್ಯಾಸನ ವಿಷಯದಲ್ಲಿಯೂ ಆತನ ಭಾಷಾವಿಷಯದಲ್ಲಿಯೂ ಆವಶ್ಯಕವಾಗಿ ತಿಳಿಸಬೇಕಾದ ವಿಷಯಗಳೆಲ್ಲಾ (ಕನ್ನಡ ಸೆಕ್ಷನ್ ನಂಬರು 3—4ನೆಯವುಗಳಾದ) ಉಪೋದ್ಘಾತಸಂಚಿಕೆ ಮತ್ತು ಸಂಭವಪರ್ವ ಇವುಗಳ ಅವತರಣಿಕೆಯಲ್ಲಿ ಹೇಳಲ್ಪಟ್ಟಿವೆ. ಆದುದರಿಂದ ಈ ಪುಸ್ತಕದಲ್ಲಿ ಅಡಗಿರುವ ಗ್ರಂಥಕ್ಕೆ ಸಂಬಂಧಿಸಿದ ವಿಶೇಷಾಂಶಗಳನ್ನು ಮಾತ್ರ ಹೇಳುವುದು ಈಗ ಆವಶ್ಯಕವಾಗಿದೆ.

ಈ ಪುಸ್ತಕದಲ್ಲಿ ಸಭಾಕ್ರಿಯಾಪರ್ವ 1 ಸಭಾಖ್ಯಾನಪರ್ವ 2 ರಾಜಸೂಯಾರಂಭಪರ್ವ 3 ಜರಾಸಂಧವಧಪರ್ವ 4 ದಿಗ್ವಿಜಯಪರ್ವ 5 ರಾಜಸೂಯಿಕಪರ್ವ 6 ಅರ್ಘಾಹರಣಪರ್ವ 7 ಶಿಶುಪಾಲವಧಪರ್ವ 8 ದ್ಯೂತಪರ್ವ 9 ಅನುದ್ಯೂತಪರ್ವ 10 ಎಂದು ಹತ್ತು ಪರ್ವಗಳು ಅಡಗಿವೆ.

ದಿಗ್ವಿಜಯಪರ್ವದಲ್ಲಿ ರಾಜಸೂಯಯಾಗದ ಕ್ರಮಗಳನ್ನು ವರ್ಣಿಸುವಾಗ, ಯಾಗದಲ್ಲಿ ಕೆಲವು ಕಾರ್ಯಗಳನ್ನು ನಿರ್ವಹಿಸುವುದಕ್ಕೋಸ್ಕರಪುರುಷಮೃಗವೆಂಬ ಪ್ರಾಣಿಯನ್ನು ಕರೆತರುವುದಕ್ಕಾಗಿ ಭೀಮಸೇನನನ್ನು ಕಳುಹಿಸಿದ ಹಾಗೂ, ಭೀಮಸೇನನು ಅದನ್ನು ಕರೆತಂದು ಕಾರ್ಯನಿರ್ವಾಹವನ್ನು ಮಾಡಿದ ಹಾಗೂ ವರ್ಣಿಸಲ್ಪಟ್ಟಿದೆ. ಈ ಕಥೆಯು ಸಂಸ್ಕೃತಮಹಾಭಾರತದಲ್ಲಿ ಕಾಣುವುದಿಲ್ಲ. ಆದರೆ ಈ ಕಥೆಯು ಜೈಮಿನಿಭಾರತದಲ್ಲಿ ಇರುವುದಾಗಿ ಕುರೇಶವಿಜಯದ ಮೂರನೆಯ ಶ್ಲೋಕದಲ್ಲಿರುವ "ಹನುಮತಃ ಪುಚ್ಛರೋಮೇಶ್ವರತ್ವಾತ್" ಎಂಬ ಪದಗಳ ವ್ಯಾಖ್ಯಾವಸರದಲ್ಲಿ ನಿರೂಪಿಸಲ್ಪಟ್ಟಿದೆ. ಆದರೆ ಆ

ಗ್ರಂಥದಲ್ಲಿ ಮಾತ್ರ ಪುರುಷಮೃಗವೆಂದು ದೀರ್ಘರಹಿತವಾಗಿ ಪ್ರಯೋಗಿಸಲ್ಪಟ್ಟಿರುವುದು. ಷಡಕ್ಷರಿದೇವಕೃತ ರಾಜಶೇಖರಗ್ರಂಥದ ಪ್ರಥಮಾಶ್ವಾಸದ 135 ನೆಯ ಗದ್ಯದಲ್ಲಿ "ಪರಿವ ಪುರುಷಾಮೃಗಗಳಿಂ" ಎಂದು ಪರ್ವತವರ್ಣನಪ್ರಸ್ತಾವದಲ್ಲಿ, ಮಹಾಭಾರತದಲ್ಲಿಯೂ ಇತರ ಕನ್ನಡ ಗ್ರಂಥಗಳಲ್ಲಿಯೂ "ಪುರುಷಾಮೃಗ" ವೆಂತ ದೀರ್ಘಸಹಿತವಾಗಿಯೂ ಪ್ರಯುಕ್ತವಾಗಿದೆ. ಪುರುಷಮೃಗವೆಂದರೂ ಪುರುಷಾಮೃಗವೆಂದರೂ ಅರ್ಥಭೇದವಿರುವುದಿಲ್ಲ. ಪುರುಷಮೃಗವೆಂದರೆ ಪುರುಷಾಕಾರವೂ ಮೃಗಾಕಾರವೂ ಉಳ್ಳದ್ದೆಂತ ಅರ್ಥ. ಪುರುಷಾಮೃಗವೆಂಬುದರಲ್ಲಿ ಪುರುಷಪದವೂ ಅಮೃಗಪದವೂ ಸೇರಿ ಇದೆ. ಅಮೃಗ ಎಂಬುದಕ್ಕೆ ಸ್ವಲ್ಪ ಮೃಗಾಕಾರವುಳ್ಳದ್ದೆಂತ ಅರ್ಥ. ಆದುದರಿಂದ ವಿರೋಧವಿರುವುದಿಲ್ಲ.

ಈ ಪುಸ್ತಕದಲ್ಲಿ ಪ್ರಚುರಿಸಿರುವ ಪಾಠಗಳು ಪ್ರಾಯಿಕವಾಗಿ ಇದುವರೆಗೂ ಮುದ್ರಿತವಾಗಿರುವ ಪುಸ್ತಕಗಳಿಗೆ ಅನುಸಾರವಾಗಿಯೇ ಇರುತ್ತವೆ.

ಈ ಸಂಚಿಕೆಯ ಶೋಧನಕ್ಕಾಗಿ ಉಪಯೋಗಿಸಿರುವ ಪುಸ್ತಕಗಳು ಕನ್ನಡ ಸೀರೀಸ್ ನಂಬರು V ನೆಯದಾದ ಎರಡನೆಯ ಸಂಪುಟಕ್ಕೆ ಉಪಯೋಗಿಸಿದುವುಗಳಾಗಿಯೇ ಇರುತ್ತವೆ.

ನಮ್ಮಿಂದ ಸಾಧ್ಯವಾದವರೆಗೂ ಬಹುಪುಸ್ತಕಗಳ ಸಹಾಯದಿಂದ ಶೋಧನಕಾರ್ಯವು ನಡೆಸಲ್ಪಟ್ಟಿದೆ. ಪ್ರಾಮಾದಿಕದೋಷಗಳೇನಾದರೂ ಇದ್ದರೆ ಸಜ್ಜನರು ಗುಣೈಕದೃಷ್ಟಿಗಳಾಗಿ ಅವುಗಳನ್ನು ಲಕ್ಷ್ಯಕ್ಕೆ ತಾರದೆ, ಸಂತೋಷಪಡುವರೆಂದು ನಂಬಲ್ಪಟ್ಟಿದೆ.



## ವಿ ಷ ಯ ಸೂ ಚಿ ಕೆ .


| ವಿಷಯ | ಪುಟ |
|---|---|
| **೧ ನೆಯ ಸಂಧಿ—** | |
| ಖಾಂಡವವನದಹನಾನಂತರ ಪುರಪ್ರವೇಶ .... .... | 1 |
| ಶ್ರೀಕೃಷ್ಣನು ದ್ವಾರಕೆಗೆ ಹೊರಡುವಿಕೆ .... .... | 3 |
| ಭೀಮಸೇನನಿಗೆ ಮಯನಿಂದ ಗದಾಪ್ರಾಪ್ತಿ .... .... | 5 |
| ಸುಮುಹೂರ್ತದಲ್ಲಿ ಮಹಾಸಭೆಯ ಪ್ರವೇಶ .... .... | 6 |
| ನಾರದರ ಆಗಮನ .... .... .... | 7 |
| ನಾರದರ ಗುಣವರ್ಣನೆ .... .... .... | 8 |
| ನಾರದರ ಆಗಮನವನ್ನು ಅಭಿನಂದಿಸುವಿಕೆ .... .... | 8 |
| ರಾಜನನ್ನು ಕುರಿತು ನಾರದರ ಕುಶಲಪ್ರಶ್ನೆ ಮತ್ತು ಧರ್ಮೋಪದೇಶ | ,, |
| ನಾರದರಿಂದ ಮಾಡಲ್ಪಟ್ಟ ಧರ್ಮೋಪದೇಶದಿಂದ ತುಷ್ಟನಾಗಿ ನಾರದರನ್ನು ಸ್ತುತಿಸುವಿಕೆ .... .... .... | 30 |
| **೨ ನೆಯ ಸಂಧಿ—** | |
| ಧರ್ಮರಾಯನು ಭೀಮಾದಿಗಳನ್ನು ಕರೆಸಿ ಆಲೋಚನೆ ಮಾಡಿದುದು.... | 34 |
| ಆಗ ಅವರುಗಳೊಪ್ಪಿ ಕೃಷ್ಣನನ್ನು ಕರೆಕಳುಹಿಸುವಿಕೆ .... | 35 |
| ಶ್ರೀಕೃಷ್ಣನ ಆಗಮನ .... .... .... | ,, |
| ಕೃಷ್ಣಧರ್ಮರ ಸಂವಾದ .... .... .... | 36 |
| ಧರ್ಮರಾಯನ ಮಾತನ್ನು ಕೇಳಿ ರಾಜಸೂಯದ ದೌರ್ಘಟ್ಯವನ್ನು ಹೇಳುವಿಕೆ .... ... .... | 37 |
| ಕೃಷ್ಣವಾಕ್ಯದಿಂದ ಯಾಗದಲ್ಲಿ ಧರ್ಮರಾಯನ ಉಪೇಕ್ಷೆ .... | 40 |
| ಯಾಗ ಮಾಡುವುದರಲ್ಲಿ ಭೀಮನು ಧೈರ್ಯವನ್ನು ಕೊಡುವಿಕೆ .... | ,, |
| ಯಾಗಕ್ಕಾಗಿ ಪ್ರಯತ್ನಿಸುವುದು ಯುಕ್ತವೆಂದು ಭೀಮಾರ್ಜುನರ ವಾಕ್ಯ | 41 |
| ಆದರಂತೆ ಶ್ರೀಕೃಷ್ಣನು ಸಮ್ಮತಿಸಿದುದು .... .... | 42 |
| ಅಲ್ಲದೆ ಭೀಮಾರ್ಜುನರನ್ನು ಕಳುಹಿಸು ನಾನು ಅನುಕೂಲನಾಗಿರುವೆನೆಂದು ಕೃಷ್ಣನ ವಾಕ್ಯ .... .... .... | ,, |

ವಿಷಯವು — ಪುಟ

ಆಗ ಸಂತುಷ್ಟನಾಗಿ ಧರ್ಮರಾಯನು ಶ್ರೀಕೃಷ್ಣನನ್ನು ಸ್ತುತಿಸುವಿಕೆ.... 42
ಮಾಗಧನನ್ನು ಜಯಿಸುವುದು ಮುಖ್ಯವೆಂದು ಕೃಷ್ಣವಾಕ್ಯ .... 43
ಮಾಗಧನ ಕಥೆಯಲ್ಲಿ ಬೃಹದ್ರಥನೆಂಬ ರಾಜನು ಪುತ್ರರಿಲ್ಲದ ದುಃಖದಿಂದ ವನಕ್ಕೆ ಹೋಗುವಿಕೆ.... .... .... ,,
ಮಾರ್ಗದಲ್ಲಿ ಚಂಡಕೌಶಿಕದರ್ಶನ .... .... 44
ರಾಜನು ಅವರ ಮುಂದೆ ತನ್ನ ಸಂಕಟವನ್ನು ಹೇಳಲು ಅನುಗ್ರಹಿಸುವಿಕೆ .... .... .... ,,
ರಾಯನ ತೊಡೆಯ ಮೇಲೆ ಬಿದ್ದ ಹಣ್ಣನ್ನು ಸತಿಗೆ ಕೊಡೆಂದು ಋಷಿಗಳ ಅಪ್ಪಣೆ .... .... .... ,,
ಮನೆಗೆ ಹೋಗಿ ಹಣ್ಣನ್ನು ಭಾಗಮಾಡಿ ತನ್ನ ಸತಿಗೆ ಕೊಟ್ಟುದುದು .... 45
ಬಳಿಕ ಗರ್ಭಿಣಿಯಾಗಿ ಪ್ರಸವಕಾಲದಲ್ಲಿ ಹುಟ್ಟಿದ ಎರಡುಸೀಳುಗಳನ್ನು ಬಿಸುಡುವಿಕೆ ... .... .... ,,
ಜರೆಯೆಂಬುವಳು ಸೀಳುಗಳನ್ನು ಜೋಡಿಸಲು ಜರಾಸಂಧನ ಜನನ .... 46
ಆಕೆಯು ಆ ಮಗುವನ್ನು ರಾಜನಿಗೆ ಕೊಡಲು ಅದನ್ನು ಸಂರಕ್ಷಿಸುವಿಕೆ 47
ಅಂಥವನ ವಿಜಯಯಾತ್ರೆಗೆ ತಮ್ಮಂದಿರನ್ನು ಕಳುಹೆಂದು ಕೃಷ್ಣನ ಅಪ್ಪಣೆ ,,
ಮಾಗಧನ ಪತ್ತನಕ್ಕೆ ತೆರಳುವಿಕೆ .... .... 48
ಕೃಷ್ಣಭೀಮಾರ್ಜುನರು ವಿಪ್ರವೇಷವನ್ನು ಧರಿಸುವಿಕೆ .... 49
ಮಗಧದೇಶದ ವರ್ಣನೆ .... ... .... ,,
ಅಲ್ಲಿರುವ ಬೆಟ್ಟದ ಮೇಲೆ ಭೇರಿಯನ್ನು ಒಡೆಯುವಿಕೆ .... 50
ಭೇರಿಯ ವೃತ್ತಾಂತ .... .... .... ,,
ಅದರಲ್ಲಿ ಮಾಷಾಸುರನ ಸಂಹಾರ .... .... 51
ವೃಷಭಾಸುರಸಂಹಾರ ಮತ್ತು ಅವನ ಚರ್ಮದಿಂದ ಭೇರಿಯ ರಚನ .... ,,
ಮಾಗಧನ ತಪಸ್ಸು .... .... .... 52
ಮಾಗಧನಿಗೆ ಭೇರಿಯ ಪ್ರಾಪ್ತಿ ಮತ್ತು ಈಶ್ವರನ ವರಗಳು .... ,,
ಈಕಾಲದಲ್ಲಿ ನಡೆದ ಭೇರೀನಾದಕ್ಕಾಗಿ ಮಾಗಧನು ಶಾಂತಿಯನ್ನು ಮಾಡುವಿಕೆ .... .... .... ,,
ಮಾಗಧನ ಮನೆಗೆ ಕೃಷ್ಣಾದಿಗಳ ಆಗಮನ .... .... 53
ಬಂದವರಿಗೆ ಮಾಗಧನ ಆದರ .... .... .... ,,
ಇವರನ್ನು ನೋಡಿ ನಾನಾವಿಧವಾಗಿ ತರ್ಕಿಸುವಿಕೆ.... ... 54

ವಿಷಯ ಪುಟ


ಕೃಷ್ಣಾದಿಗಳನ್ನು ಕುರಿತು ಮಾಗಧನ ಪ್ರಶ್ನೆ .... .... 55
ಕೃಷ್ಣಾದಿಗಳಿಗೂ ಮಾಗಧನಿಗೂ ನಡೆದ ಸಂವಾದ .... ... ,,
ತಮ್ಮ ವೃತ್ತಾಂತವನ್ನು ಕೃಷ್ಣನು ಹೇಳುವಿಕೆ .... .... 57
ಕೃಷ್ಣಮಾಗಧರ ಪರಸ್ಪರಾಪಹಾಸ .... .... ,,
ಭೀಮಾದಿಗಳನ್ನು ಕುರಿತು ಮಾಗಧನ ವಚನ .... .... 59
ಯುದ್ಧಕ್ಕೆ ಬಾ ಯೆಂದು ಭೀಮನ ವಾಕ್ಯ .... .... ,,
ಭೀಮಾರ್ಜುನರನ್ನು ಹೆದರಿಸುವಿಕೆ ... ... ,,
ಕೃಷ್ಣಜರಾಸಂಧರ ಸಂವಾದ .... .... .... 60
ಯುದ್ಧೋದ್ಯೋಗ .... .... ... 61
ಯುದ್ಧಾರಂಭ .... .... .... 62
ಯುದ್ಧ ನಡೆದ ಕ್ರಮ .... .... .... ,,
ಆಗ ಜರಾಸಂಧನಿಗೆ ಯುದ್ಧದಲ್ಲಿ ಅಧೈರ್ಯ ಹುಟ್ಟುವಿಕೆ .... 67
ಭೀಮನನ್ನು ಕುರಿತು ಕೃಷ್ಣನ ಉಪದೇಶ ... ... ,,
ಭೀಮಸೇನನು ಜರಾಸಂಧನನ್ನು ಸೀಳುವಿಕೆ .... .... 68
ಜರಾಸಂಧನು ದೇಹದ ಸೀಳೆರಡು ಸೇರಲು ಯುದ್ಧಕ್ಕೆ ಸಿದ್ಧನಾಗುವಿಕೆ ,,
ಕೃಷ್ಣನ ಅಪ್ಪಣೆಪ್ರಕಾರ ಜರಾಸಂಧನನ್ನು ಸೀಳುವಿಕೆ .... 71
ಆಗ ಸರ್ವರೂ ಭಯದಿಂದೋಡುತ್ತಿರಲು ಅಂಜದಿರಿ ಯೆಂದು ಶ್ರೀಕೃಷ್ಣನು ಹೇಳುವಿಕೆ .... .... .... 72
ಬಂಧನದಲ್ಲಿದ್ದ ರಾಜರನ್ನು ಬಿಡಿಸುವಿಕೆ .... .... 73
ಆ ನೃಪರು ಅಪ್ಪಣೆಯನ್ನು ನಿರೀಕ್ಷಿಸುವಿಕೆ .... ... ,,
ನೀವು ರಾಜಸೂಯಸಮಯದಲ್ಲಿ ಬನ್ನಿರೆಂದು ಶ್ರೀಕೃಷ್ಣನ ಅಪ್ಪಣೆ .... ,,
ಸಪರಿವಾರನಾಗಿ ಸಹದೇವನು ಭೀಮಾರ್ಜುನರನ್ನು ವಂದಿಸುವಿಕೆ .... ,,
ಜರಾಸಂಧನ ಸಂಸ್ಕಾರ .... .... .... 74
ಸಹದೇವನಿಗೆ ರಾಜ್ಯವನ್ನು ಕೊಡುವಿಕೆ .... .... ,,

೩ನೆಯ ಸಂಧಿ—

ಅರ್ಜುನನ ದಿಗ್ವಿಜಯ .... .... .... 75
ಕೃಷ್ಣನು ಯುಧಿಷ್ಠಿರನಿಗೆ ಮಾಗಧಪುರಪ್ರವೇಶಾದಿಗಳನ್ನು ಹೇಳುವಿಕೆ ,,
ಯಾಗಾರಂಭಕ್ಕೋಸ್ಕರ ಕೃಷ್ಣನ ಅಪ್ಪಣೆ .... .... 76

| ವಿಷಯ | ಪುಟ |
|---|---|
| ಶ್ರೀಕೃಷ್ಣನ ದ್ವಾರಕಾಗಮನ .... .... .... | 76 |
| ಯುಧಿಷ್ಠಿರನು ವೇದವ್ಯಾಸರೊಡನೆ ಮಾಡಿದ ಯೋಚನೆ .... | ,, |
| ಧರ್ಮರಾಯನ ಚಿಂತೆ ... .... ... | 77 |
| ಅರ್ಜುನನು ಧೈರ್ಯವನ್ನು ಹುಟ್ಟಿಸುವಿಕೆ .... .... | ,, |
| ವಿಜಯಯಾತ್ರೆಗೋಸ್ಕರ ಭೀಮಾದಿಗಳನ್ನು ವ್ಯಾಸನು ಕಳುಹಿಸಿದುದು | 78 |
| ಅರ್ಜುನನ ವಿಜಯಯಾತ್ರೆ .... .... ... | 79 |
| ಸಾಲ್ವದೇಶದ ವಿಜಯ .... ... .... | ,, |
| ಕಟದೇವನ ಪರಾಜಯ .... .... .... | ,, |
| ಪ್ರತಿವಿಂಧ್ಯಾದಿಗಳನ್ನು ಗೆಲ್ಲುವಿಕೆ .... .... | 80 |
| ಅರ್ಜುನಭಗದತ್ತರ ಯುದ್ಧ .... .... .... | ,, |
| ಭಗದತ್ತನು ಅರ್ಜುನನೆಂದು ತಿಳಿದು ಸನ್ಮಾನಿಸುವಿಕೆ ... | 81 |
| ಭಗದತ್ತನಿಂದ ಅರ್ಜುನನಿಗೆ ಆದ ಮರ್ಯಾದೆ .... .... | ,, |
| ಪರ್ವತವಾಸಿಗಳನ್ನು ಜಯಿಸುವಿಕೆ .... .... | ,, |
| ವನಚರರನ್ನು ಮತ್ತು ದೈತ್ಯರನ್ನು ಜಯಿಸುವಿಕೆ .... | 82 |
| ಕಾಶ್ಮೀರಾದಿಗಳನ್ನು ಜಯಿಸುವಿಕೆ .... ... | ,, |
| ಸಿಂಹನಗರಿಯ ಗಮನ .... .... .... | ,, |
| ಕಿರಾತಾದಿಗಳನ್ನು ಜಯಿಸುವಿಕೆ .... .... | 83 |
| ಹಿಮಾಲಯದಲ್ಲಿದ್ದ ಜನರನ್ನು ಜಯಿಸುವಿಕೆ .... .... | ,, |
| ಹೇಮಕೂಟದ ಗಂಧರ್ವಾದಿಗಳನ್ನು ಜಯಿಸುವಿಕೆ .... | 84 |
| ನಿಷಧಾಚಲವಾಸಿಗಳಾದ ದೈತ್ಯರನ್ನು ಜಯಿಸುವಿಕೆ .... | 85 |
| ಗಂಧಮಾದನದ ಯಕ್ಷವಿದ್ಯಾಧರರನ್ನು ಗೆಲ್ಲುವಿಕೆ .... .... | 86 |
| ಜಂಬೂವೃಕ್ಷದರ್ಶನ .... ... .... | ,, |
| ಜಾಂಬೂನದನದಿಯ ತೀರದಲ್ಲಿರುವಿಕೆ .... .... | 87 |
| ಇಳಾವೃತವರ್ಷಪ್ರವೇಶ .... .... .... | ,, |
| ಅಲ್ಲಿ ಮಹಾಧನಸಂಗ್ರಹ .... .... ... | 88 |
| ಮಂದರಾದ್ರಿಯ ದರ್ಶನ .... .... .... | ,, |
| ಅಲ್ಲಿದ್ದ ರಾಕ್ಷಸರನ್ನು ಜಯಿಸುವಿಕೆ .... .... | ,, |
| **೮ ನೆಯ ಸಂಧಿ** | |
| ಭೀಮಸೇನನ ದಿಗ್ವಿಜಯ .... .... .... | 94 |

| ವಿಷಯು | | | | ಪುಟ |
|---|---|---|---|---|

೫ ನೆಯು ಸಂಧಿ—


ಸಹದೇವನ ದಿಗ್ವಿಜಯು .... .... .... 97
ಅನೇಕರಾಜರ ಜಯು ಮತ್ತು ಧನಸಂಗ್ರಹ .... .... 98
ಕಾವೇರಿಯು ಬಳಿ ಇರುವ ಮಾಹಿಷ್ಮತೀನಗರಪ್ರವೇಶ .... 100
ಅಲ್ಲಿ ಸಹದೇವನ ಸೈನ್ಯದಹನ .... .... .... ,,
ಸುಟ್ಟುದಕ್ಕೆ ಕಾರಣವನ್ನು ವೈಶಂಪಾಯುನರು ಹೇಳಿದುದು .... 101
ಆಗ ಸಹದೇವನು ಅಗ್ನಿಯನ್ನು ಸ್ತುತಿಸುವಿಕೆ .... .... 102
ಅಗ್ನಿಯು ಸಹದೇವನಿಗೆ ವರವನ್ನು ಕೊಡುವಿಕೆ .... .... ,,
ಬಳಿಕ ಅನೇಕರಾಜರನ್ನು ಗೆಲ್ಲುವಿಕೆ .... .... 103
ಘಟೋತ್ಕಚನಿಗೆ ಸಹದೇವನ ಪತ್ರಪ್ರೇಷಣ ... .... ,,
ಸಹದೇವನ ಅಪ್ಪಣೆಯಂತೆ ಘಟೋತ್ಕಚನ ಲಂಕಾಪ್ರಯಾಣ ಮತ್ತು
ಅಲ್ಲಿನವರ ಜಯು .... .... ... ,,
ವಿಭೀಷಣಘಟೋತ್ಕಚರ ಸಂವಾದ .... .... 105
ಅಲ್ಲಿ ಘಟೋತ್ಕಚನು ಭೀಮನ ತನಯುನೆಂದು ಹೇಳುವಿಕೆ ... 106
ವಿಭೀಷಣನು ಪೂರ್ವವೃತ್ತವನ್ನು ನೆನೆದು ಘಟೋತ್ಕಚನನ್ನಾದರಿಸುವಿಕೆ 108
ಆಗ ರಾಕ್ಷಸಭಟರು ಘಟೋತ್ಕಚನನ್ನು ಹಿಯ್ಯಾಳಿಸಿ ಗರ್ಜಿಸುವಿಕೆ .... 109
ಆಭಟರನ್ನು ವಿಭೀಷಣನು ಸಮಾಧಾನಪಡಿಸುವಿಕೆ .... .... ,,
ನಾನಾವಿಧಪದಾರ್ಥಗಳನ್ನು ತರಿಸಿ ಕೊಡುವಿಕೆ .... .... 110
ಆಗ ಭಟರನ್ನು ನೋಡಿ ಸಹದೇವನ ಭಟರು ಹೆದರುವಿಕೆ .... 112


೬ ನೆಯು ಸಂಧಿ—


ಯುವನನೇಪಾಳಾದಿದೇಶಗಳ ಅರಸರನ್ನು ಗೆಲ್ಲುವಿಕೆ .... 113
ನಕುಲನಿಗೆ ಶಲ್ಯನಿಂದ ಆದ ಮರ್ಯಾದೆ .... .... 114
ಮ್ಲೇಚ್ಛರಾಜರನ್ನು ಗೆದ್ದುದು .. .... .... 115
ಧರ್ಮರಾಯುನ ರಾಜ್ಯಭಾರ ... .... .... ,,
ಶ್ರೀಕೃಷ್ಣನನ್ನು ಕರೆಕಳುಹಿಸೆಂದು ವ್ಯಾಸರ ಉಪದೇಶ .... 117
ಅರ್ಜುನನು ಶ್ರೀಕೃಷ್ಣನ ಬಳಿಗೆ ಬಂದು ಕರೆಯುುವಿಕೆ .... ,,
ಶ್ರೀಕೃಷ್ಣನ ಬರುವಿಕೆ .... .... .... 118

ವಿಷಯ ಪುಟ

ಕೃಷ್ಣ ಮತ್ತು ಧರ್ಮರಾಯನ ಸಂಭಾಷಣೆ .... .... ,,
ಯಾಗಶಾಲಾನಿರ್ಮಾಣ .... .... .... 119

೭ ನೆಯ ಸಂಧಿ—

ಧರ್ಮರಾಯನ ಚಿಂತೆ .... .... .... 120
ಧೌಮ್ಯರ ಅಪ್ಪಣೆಯಂತೆ ಶ್ರೀಕೃಷ್ಣನ ಬಳಿ ಬರುವಿಕೆ .... ,,
ಧರ್ಮರಾಯನನ್ನು ಕುರಿತು ಕೃಷ್ಣನ ಪ್ರಶ್ನೆ .... .... 121
ರಾಜಸೂಯದಲ್ಲಿ ಎಂಜಲಿನ ಶುದ್ಧಿಗೆ ಪುರುಷಾಮೃಗವನ್ನು ತರಿಸೆಂದು ಕೃಷ್ಣನ ಅಪ್ಪಣೆ .... .... .... ,,
ಅದನ್ನು ಕರೆತರುವುದಕ್ಕಾಗಿ ಭೀಮನನ್ನು ಕರೆಸುವಿಕೆ .... 122
ಅಣ್ಣನ ಅಪ್ಪಣೆಯಂತೆ ಭೀಮಸೇನನ ಪ್ರಯಾಣ .... .... ,,
ಮಾರ್ಗಮಧ್ಯದಲ್ಲಿ ಹನುಮಂತನ ದರ್ಶನ ಮತ್ತು ಸಂಭಾಷಣೆ .... 123
ಆಮೃಗದ ಶಕ್ತಿಯನ್ನು ಹೇಳಿ ತರುವ ಉಪಾಯವನ್ನು ಹೇಳುವಿಕೆ .... 124
ಪುರುಷಾಮೃಗದರ್ಶನ .... .... .... 125
ಭೀಮಪುರುಷಾಮೃಗರ ಸಂಭಾಷಣೆ .... .... 126
ಆಮೃಗವು ತೊಂದರೆಮಾಡಲು ಹನುಮಂತನು ಕೊಟ್ಟದ್ದ ರೋಮವನ್ನು ಹಾಕುವಿಕೆ ... ... .... 127
ಆರೋಮವು ಈಶ್ವರಮೂರ್ತಿಯಾದದ್ದು .... .... ,,
ಆಗ ಆಮೃಗವು ಈಶ್ವರನನ್ನು ಪೂಜಿಸುವಿಕೆ .... ... 128
ಮತ್ತೆ ತೊಂದರೆಮಾಡಲು ರೋಮವನ್ನು ಹಾಕುವಿಕೆ .... ,,
ತಿರುಗಿ ಈಶ್ವರಾಕಾರವನ್ನು ಧರಿಸಲು ಅದನ್ನಾರಾಧಿಸುವಿಕೆ .... ,,
ಭೀಮಸೇನನ ಚಿಂತೆ .... .... .... 129
ಭೀಮಸೇನನು ಬೀಳಲು ಅರ್ಜುನನು ಎತ್ತುವಿಕೆ .... .... 130
ಅರ್ಜುನಪುರುಷಾಮೃಗರ ಸಂವಾದ .... .... ,,
ಕೃಷ್ಣನ ಪ್ರಶ್ನೆ .... .... .... 131
ಧರ್ಮರಾಯನ ಉತ್ತರ .... .... .... ,,

೮ ನೆಯ ಸಂಧಿ—

ನಾನಾದೇಶಗಳಿಂದ ರಾಜಾದಿಗಳು ಬರುವಿಕೆ .... .... 134

| ವಿಷಯ | | ಪುಟ |
|---|---|---|
| ಧರ್ಮರಾಯನು ಭೀಷ್ಮರನ್ನು ಕುರಿತು ಪ್ರಾರ್ಥಿಸುವಿಕೆ | .... | 137 |
| ರಾಜಸೂಯದಲ್ಲಿ ನೆರೆದ ಜನಗಳು ಕಾರ್ಯನಿರ್ವಹಿಸಿದ ಕ್ರಮ | .... | ,, |
| ಯಾಗಸಾಧನವು ಸಿದ್ಧವಾಗುವಿಕೆ | .... | 139 |
| ಅಧ್ವರ್ಯುರ್ಉದ್ಗಾತೃಹೋತೃಗಳ ವ್ಯವಸ್ಥೆ | .... | 140 |
| ಧರ್ಮರಾಯನು ಕೃಷ್ಣನನ್ನು ಪ್ರಾರ್ಥಿಸುವಿಕೆ | .... | ,, |
| ಯಾಗದೀಕ್ಷಿತನಾಗೆಂದು ಕೃಷ್ಣನ ಅಪ್ಪಣೆ | .... | ,, |
| ಆಗ ಪಂಡಿತರ ವಿಚಾರ | ... | 142 |
| ಯಾಗದಲ್ಲಿ ವಿಪ್ರರು ತೃಪ್ತರಾಗುವಿಕೆ | .... | 143 |


೯ ನೆಯ ಸಂಧಿ—


| | | |
|---|---|---|
| ಧರ್ಮರಾಯನು ಅಗ್ರಪೂಜಾರ್ಹರಾರೆಂದು ಭೀಷ್ಮರನ್ನು ಕೇಳುವಿಕೆ | .... | 146 |
| ಭೀಷ್ಮರು ಕೃಷ್ಣನು ಅಗ್ರಪೂಜಾರ್ಹನೆಂದು ಹೇಳುವಿಕೆ | .... | 147 |
| ಈಮಾತನ್ನು ವ್ಯಾಸಾದಿಗಳು ಒಪ್ಪುವಿಕೆ | .... | ,, |
| ಆಗ ಸಹದೇವನು ಕೃಷ್ಣನನ್ನು ಪೂಜೆಯಿಂದ ಆದರಿಸುವಿಕೆ | ... | 148 |
| ಕೃಷ್ಣಪೂಜೆಯನ್ನು ಸಭಿಕರೆಲ್ಲರೂ ಸಂತೋಷದಿಂದ ಅಭಿನಂದಿಸುವಿಕೆ | | ,, |
| ಆಗ ಶಿಶುಪಾಲನ ಆಕ್ಷೇಪಣೆ | .... | 149 |
| ಸಹದೇವನನ್ನು ಕುರಿತು ಶಿಶುಪಾಲನ ಬಿರುನುಡಿಗಳು | .... | 150 |
| ಭೀಷ್ಮರನ್ನು ಕುರಿತು ಶಿಶುಪಾಲನ ಬಿರುನುಡಿಗಳು | .... | 151 |
| ನಾನಾಕಾರಣಗಳಿಂದ ಕೃಷ್ಣನು ಪೂಜಾಯೋಗ್ಯನಲ್ಲವೆಂದು ಹೇಳುವಿಕೆ | | 152 |
| ಕೃಷ್ಣನನ್ನು ಸಂಬೋಧಿಸಿ ಶಿಶುಪಾಲನಾಡಿದ ದುರುಕ್ತಿಗಳು | .... | 153 |
| ಶಿಶುಪಾಲನ ದುರುಕ್ತಿಗಳನ್ನು ಕೇಳಿ ಕೃತವರ್ಮಾದಿಗಳು ರೇಗುವಿಕೆ | .... | 156 |
| ಕೃಷ್ಣದೂಷಕರನ್ನು ಸಹದೇವನು ತಿರಸ್ಕರಿಸುವಿಕೆ | .... | 157 |
| ಭೀಷ್ಮರು ಶಿಶುಪಾಲನನ್ನು ದೂಷಿಸಿ ಕೃಷ್ಣನನ್ನು ಸ್ತುತಿಸುವಿಕೆ | .... | 158 |


೧೦ ನೆಯ ಸಂಧಿ—


| | | |
|---|---|---|
| ಭೀಷ್ಮರು ಕೃಷ್ಣಮಾಹಾತ್ಮ್ಯವನ್ನು ಹೇಳಲಾರಂಭಿಸುವಿಕೆ | .... | 161 |
| ಭೀಷ್ಮರು ಹೇಳಿದ ಕೃಷ್ಣಮಾಹಾತ್ಮ್ಯವನ್ನು ಸಹದೇವನು ಕೇಳಿ ಅಭಿನಂದಿಸುವಿಕೆ | .... | 177 |
| ಸಹದೇವನು ಕೃಷ್ಣನೇ ಗುರುದೈವವೆಂದು ಖಂಡಿತವಾಗಿ ಹೇಳುವಿಕೆ | ... | ,, |

| ವಿಷಯ | ಪುಟ |
| --- | --- |
| ೧೧ ನೆಯ ಸಂಧಿ— | |
| ಸಹದೇವನ ವಚನವನ್ನು ಕೇಳಿದ ರಾಜರ ಅಭಿಪ್ರಾಯವಿಶೇಷ .... | 178 |
| ಕುಪಿತರಾದ ಅರಸರನ್ನು ಕುರಿತು ಶಿಶುಪಾಲನ ವಚನ .... | 179 |
| ಧರ್ಮರಾಯನು ಭೀಷ್ಮರಿಂದೊಡಗೂಡಿ ಆಲೋಚಿಸುವಿಕೆ .... | 180 |
| ಧರ್ಮರಾಯನಿಗೆ ಭೀಷ್ಮರ ಅಭಯದಾನ .... .... | ,, |
| ಭೀಷ್ಮರನ್ನು ಕುರಿತು ಶಿಶುಪಾಲನ ನಿಂದೆ .... .... | 182 |
| ಶಿಶುಪಾಲನು ಮಾಡಿದ ಕೃಷ್ಣನಿಂದೆ .... .... | 181 |
| ಭೀಮನ ಕೋಪ ... .... .... | 184 |
| ಶಿಶುಪಾಲನ ನಿಂದೆಯಿಂದ ಯಾದವರ ಯುದ್ಧಸನ್ನಾಹ .... | 185 |
| ಭೀಷ್ಮರಿಂದ ಯಾದವರ ಉಪಶಮನ .... .... | ,, |
| ಶಿಶುಪಾಲನ ಕ್ರೋಧೋಕ್ತಿ .... ... .... | 186 |
| ಶಿಶುಪಾಲನ ಸಂಹಾರಕ್ಕಾಗಿ ಭೀಮನ ಪ್ರಯತ್ನ .... .... | ,, |
| ಭೀಷ್ಮರು ಶಿಶುಪಾಲನ ಪೂರ್ವವೃತ್ತಾಂತವನ್ನು ಹೇಳಿ ಭೀಮನನ್ನು ತಡೆದುದು | 187 |
| ಭೀಷ್ಮರು ಹೇಳಿದ ಚರಿತ್ರೆಯಿಂದ ಕುಪಿತನಾಗಿ ಶಿಶುಪಾಲನು ಭೀಷ್ಮರನ್ನು ನಿಂದಿಸುವಿಕೆ .... ... .... | 188 |
| ಭೀಷ್ಮರ ಮೇಲೆ ಸರ್ವರಾಜರ ಕೋಪ .... .... | 192 |
| ಕೃಷ್ಣೋತ್ಕರ್ಷವನ್ನು ನಿರ್ಭಯವಾಗಿ ಭೀಷ್ಮರು ಸ್ಥಾಪಿಸುವಿಕೆ .... | ,, |
| ಶಿಶುಪಾಲನ ದುರುಕ್ತಿಗಳು ... .... .... | 193 |
| ಆಗ ಯಾದವರ ಯುದ್ಧಸನ್ನಾಹ .... .... | 194 |
| ಕೃಷ್ಣನು ಅಭಯವನ್ನು ಹೇಳುತ್ತಾ ಯುದ್ಧಕ್ಕೆ ಬಂದುದು .... | 195 |
| ನಾರದಾದಿಗಳನ್ನು ಕುರಿತು ಕೃಷ್ಣವಾಕ್ಯ ... .... | ,, |
| ಶಿಶುಪಾಲನನ್ನು ಕುರಿತು ಕೃಷ್ಣನ ವಾಕ್ಯ .... .... | ,, |
| ದುರ್ಯೋಧನಾದಿಗಳ ಉಪೇಕ್ಷೆ.... .... .... | 196 |
| ರಾಜರ ಮೇಲೆ ಶಿಶುಪಾಲನ ಕೋಪ .... ... | ,, |
| ಕೃಷ್ಣಶಿಶುಪಾಲರ ಯುದ್ಧ .... ... .... | 197 |
| ಆಗ ನಾನಾವಿಧ ಉತ್ಪಾತಗಳು.... .... .... | ,, |
| ಆಗ ಧರ್ಮರಾಯನು ಉತ್ಪಾತಶಾಂತಿಯನ್ನು ಹೇಳುವಿಕೆ .... | 198 |
| ಶಿಶುಪಾಲನ ಸಂಹಾರ .... .... .... | 199 |

| ವಿಷಯ | ಪುಟ |
|---|---|
| ಆಗ ಜನಗಳ ಮಾತುಗಳು .... .... .... | 200 |
| ಕೃಷ್ಣನು ಶಿಶುಪಾಲಪುತ್ರರನ್ನು ಅನುಗ್ರಹಿಸಿದುದು.... .... | 201 |
| **೧೦ನೆಯ ಸಂಧಿ—** | |
| ಯಾಗ ನಡೆದ ಕ್ರಮ .... .. .... | 201 |
| ಅವಭೃಥಾದಿಗಳು .... .... .... | 202 |
| ಅಲ್ಲಿ ನಡೆದ ಬ್ರಾಹ್ಮಣ ಭೋಜನಕ್ರಮ .... .... | ,, |
| ಧರ್ಮರಾಯನು ಋಷಿಗಳನ್ನು ಅಭಿನಂದಿಸುವಿಕೆ .... .... | 203 |
| ಋಷಿಗಳು ಬಹುಮಾನಿತರಾಗಿ ತಮ್ಮತಮ್ಮಾಶ್ರಮಕ್ಕೆ ತೆರಳಿದುದು .... | ,, |
| ರಾಜವರ್ಗವು ಬಹುಮಾನಿತವಾಗಿ ಪ್ರಯಾಣ ಮಾಡಿದುದು .... | 204 |
| ಪಾಂಡವರನ್ನು ಕುರಿತು ಯಾಗಸಿದ್ಧಿಯಾಯಿತೆ ಎಂದು ಶ್ರೀಕೃಷ್ಣನ ಪ್ರಶ್ನೆ | ,, |
| ಧರ್ಮರಾಯನು ಶ್ರೀಕೃಷ್ಣನ ಪಾದದ ಮೇಲೆ ಬಿದ್ದು ಸ್ತುತಿಸುವಿಕೆ .... | 205 |
| ಶ್ರೀಕೃಷ್ಣನು ಸಂತೋಷದಿಂದ ಧರ್ಮರಾಯನನ್ನು ನೋಡಿ ಆಲಂಗಿಸುವಿಕೆ | 206 |
| ದ್ರೌಪದಿಗೆ ಶ್ರೀಕೃಷ್ಣನ ಉಪದೇಶ .... .... | ,, |
| ದ್ವಾರಕೆಗೆ ಶ್ರೀಕೃಷ್ಣನ ಪ್ರಯಾಣ .... ... | 207 |
| ಕೃಷ್ಣವಿರಹದಿಂದ ಧರ್ಮರಾಯನ ದುಃಖ .... .... | 208 |
| ಧರ್ಮರಾಯನಿಗೆ ವ್ಯಾಸರ ಉಪದೇಶ .... .... | 209 |
| **೧೧ನೆಯ ಸಂಧಿ—** | |
| ದುರ್ಯೋಧನನು ಅಸೂಯೆಯಿಂದ ದುಃಖದಿಂದಿರುವಿಕೆ .... | 212 |
| ಆಗ ಸರ್ವವಿಷಯದಲ್ಲಿಯೂ ದುರ್ಯೋಧನನ ಜಿಹಾಸೆ .... | 213 |
| ಆಗ ಜನಗಳ ಸ್ವಚ್ಛಂದಾಚರಣೆ .... .... | ,, |
| ದುರ್ಯೋಧನನ ವಿಷಯದಲ್ಲಿ ಜನರ ನಾನಾವಿಧಊಹೆ .... | 214 |
| ದೇಶ ಅರಾಜಕವಾಯಿತೆಂದು ಭೀಷ್ಮಾದಿಗಳಿರಲು ಶಕುನಿಯ ಆಗಮನ | ,, |
| ಶಕುನಿಯು ಈ ಅವಸ್ಥೆಗೆ ಕಾರಣವೇನೆಂದು ದುರ್ಯೋಧನನನ್ನು ಕೇಳುವಿಕೆ .... .... .... | 215 |
| ಶಕುನಿದುರ್ಯೋಧನರ ಸಂವಾದ .... .... | ,, |
| ನಿನ್ನ ನಡತೆ ಯುಕ್ತವಲ್ಲೆಂದು ಶಕುನಿಯು ಹೇಳಲಾಗಿ ದುರ್ಯೋಧನನ ಪತನ .... .... .... .... | 216 |
| ಆಗ ಅವನನ್ನು ಎತ್ತಿ ಸಮಾಧಾನ ಪಡಿಸುವಿಕೆ .... ... | 217 |

| ವಿಷಯು | | | ಪುಟ |
|---|---|---|---|
| ಅವರನ್ನು ಜೂಜಿನಲ್ಲಿ ಗೆದ್ದು ಸರ್ವಸಂಪತ್ತನ್ನು ನಿನಗೆ ಕೊಡಿಸುವೆನೆಂದು ಶಕುನಿಯು ಪ್ರತಿಜ್ಞೆ ... | .... | .... | ,, |
| ಇದನ್ನು ಧೃತರಾಷ್ಟ್ರನಿಗೆ ಹೇಳೆಂದು ಶಕುನಿಯು ಹೇಳಿಕೆ | | .... | 218 |
| ನೀನೇ ಹೇಳೆಂದು ದುರ್ಯೋಧನನ ಉತ್ತರ | .... | .... | ,, |
| ಶಕುನಿಯು ಬಂದು ದುರ್ಯೋಧನನ ವಿಷಯವನ್ನು ಹೇಳುವಿಕೆ | | .... | ,, |
| ಶಕುನಿಯು ಹೇಳಿಕೆಯಂತೆ ದುರ್ಯೋಧನನನ್ನು ಕರೆಸುವಿಕೆ | | .... | 219 |
| ದುಃಖಕ್ಕೆ ಕಾರಣವೇನೆಂದು ತಂದೆಯು ಪ್ರಶ್ನೆ | .... | .... | ,, |
| ಪಾಂಡವರ ವೈಭವವೇ ಕಾರಣವೆಂದು ಹೇಳಿ ವೈಭವವನ್ನು ಹೇಳಿದುದು | | | 220 |
| ಪಾಂಡವರ ಮನೆಯಲ್ಲಿ ತನಗಾದ ಅವಮಾನವನ್ನು ದುರ್ಯೋಧನನು ಹೇಳುವಿಕೆ | .... | .... | 223 |
| ಇದರಿಂದ ಅವರಲ್ಲಿ ನನಗೆ ಕ್ರೋಧವೆಂದು ಹೇಳುವಿಕೆ | | .... | 224 |
| ದುರ್ಯೋಧನನ ದುರ್ಬುದ್ಧಿಗಾಗಿ ತಂದೆಯು ಚಿಂತೆ | | .... | 225 |
| ಇದು ಅಯುಕ್ತವೆಂದು ಮಗನಿಗೆ ತಂದೆಯು ಉಪದೇಶ | | .... | 226 |
| ಧೃತರಾಷ್ಟ್ರನನ್ನು ಕುರಿತು ದುರ್ಯೋಧನನ ನಿಷ್ಠುರವಾಕ್ಯಗಳು ... | | | ,, |
| ಧೃತರಾಷ್ಟ್ರನು ಅದನ್ನು ಕೇಳಿ ಸುಮ್ಮನೆ ಇರುವಿಕೆ | | .... | 227 |
| ಆಗ ದುರ್ಯೋಧನನು ಕೋಪದಿಂದ ಹೊರಟುಹೋಗುವಿಕೆ | | .... | 228 |
| ಧೃತರಾಷ್ಟ್ರನು ಮಗನನ್ನು ಕರೆಸುವಿಕೆ | .... | .... | ,, |
| ಅಸಾಧ್ಯರಾದ ಪಾಂಡವರನ್ನು ಯಾವರೀತಿಯಿಂದ ಜಯಿಸುವುದೆಂದು ಧೃತರಾಷ್ಟ್ರನ ಪ್ರಶ್ನೆ ... | .... | .... | ,, |
| ದ್ಯೂತದಲ್ಲಿ ಜಯಿಸಬಹುದೆಂದು ಶಕುನಿಯು ಉತ್ತರ | | .... | 229 |
| ಅದನ್ನು ಒಪ್ಪಿ ವಿದುರನಿಗೆ ಹೇಳಿ ಮಾಡುವೆನೆಂದು ತಂದೆಯು ಹೇಳುವಿಕೆ | .... | .... | ,, |
| ಈ ಕಾರ್ಯಕ್ಕೆ ವಿದುರನು ಬೇಡವೆಂದು ಮಗನು ಹೇಳಿದುದು | | .... | 230 |
| ವಿದುರನನ್ನು ಬಿಟ್ಟರೆ ನಿನ್ನಭಿಮತಸಿದ್ಧಿಸುವುದಿಲ್ಲವೆಂದು ತಂದೆಯು ಹೇಳಿಕೆ | .... | .... | ,, |
| ಹೇಗಾದರೂ ಕರೆಸಿ ಕೊಟ್ಟರೆ ಸಾಕೆಂದು ಮಗನ ಹೇಳಿಕೆ | | .... | 231 |
| ಆಗ ಗಾಂಧಾರಿ ಧೃತರಾಷ್ಟ್ರರ ಯೋಚನೆ | .... | .... | ,, |
| ಕೌರವರನ್ನಾದರೂ ಹಿಡಿ ಪಾಂಡವರನ್ನಾದರೂ ಹಿಡಿ ಯೆಂದು ಗಾಂಧಾರಿಯ ಹೇಳಿಕೆ | .... | .... | 232 |
| ಆಗ ಸಭಾನಿರ್ಮಾಣೋದ್ಯೋಗ | .... | .... | ,, |

| ವಿಷಯು | ಪುಟ |
|---|---|
| ವಿದುರನಿಗೆ ದ್ಯೂತಸಂಗತಿಯನ್ನು ಹೇಳುವಿಕೆ .... .... | 233 |
| ವಿದುರನು ಅದನ್ನು ಕೇಳಿ ಯುಕ್ತವಲ್ಲವೆಂದು ಹೇಳುವಿಕೆ .... | 234 |
| ವಿದುರನಿಗೆ ಧೃತರಾಷ್ಟ್ರನ ಸಮಾಧಾನೋಕ್ತಿ.... .... | ,, |
| ದ್ಯೂತವು ಕುಲನಾಶಕರವೆಂದು ವಿದುರನ ವಚನ ... | 235 |
| ಆಗ ಪಾಂಡವರನ್ನು ಕರೆತರಲು ವಿದುರನನ್ನು ಕಳುಹಿಸುವಿಕೆ .... | ,, |
| ವಿದುರನು ಪಾಂಡವರ ಬಳಿ ಬರುವಿಕೆ .... .... | ,, |
| ಆಗ ವಿದುರನನ್ನು ಮಾನಿಸಿ ಸರ್ವರ ಕ್ಷೇಮವನ್ನು ಕೇಳಿದುದು .... | 236 |
| ಪಾಂಡವರನ್ನು ಕುರಿತು ನೀವು ಬರಲು ಧೃತರಾಷ್ಟ್ರನ ಅಪ್ಪಣೆಯಾಗಿದೆ ಯೆಂದು ಹೇಳುವಿಕೆ .... .... | ,, |
| ಆಗ ಬರುವೆವೆಂದು ಧರ್ಮಸುತನ ಉತ್ತರ .... .... | 237 |
| ದ್ಯೂತದ ವಿಷಯುವನ್ನು ಹೇಳಿ ಆಲೋಚನೆಯಿಂದ ಕಾರ್ಯದಲ್ಲಿ ಪ್ರವರ್ತಿಸು ಎಂದು ವಿದುರನ ವಾಕ್ಯ .... .... | ,, |
| ಆರ್ಯನಾದ ಧೃತರಾಷ್ಟ್ರನ ಮಾತನ್ನು ನಂಬಿ ಬರುವೆವೆಂದು ಧರ್ಮರಾಯನ ಉತ್ತರ .... ... .... | 239 |

೧೪ ನೆಯ ಸಂಧಿ —

| | |
|---|---|
| ಪಾಂಡವರು ಹಸ್ತಿನಾವತಿಗೆ ಬಂದುದು .... .... | 241 |
| ಆಗ ಅಪಶಕುನಗಳು .... .... .... | ,, |
| ಈಗ ಪ್ರಯಾಣ ನಿಲ್ಲಿಸೆಂದು ವಿಪ್ರರ ನುಡಿಗಳು .... | 242 |
| ಧರ್ಮರಾಯನು ಅದನ್ನುಪೇಕ್ಷಿಸುವಿಕೆ .... .... | ,, |
| ಹಸ್ತಿನಾವತಿಯ ಪ್ರವೇಶ .... .... .... | ,, |
| ಪಾಂಡವರಲ್ಲಿ ಧೃತರಾಷ್ಟ್ರನ ಆದರ .... .... | 243 |
| ಆಗ ದುರ್ಯೋಧನಾದಿಗಳ ಸಂತೋಷ .... .... | 245 |
| ದುಸ್ಸ್ವಪ್ನ ದರ್ಶನ .... .... .... | ,, |
| ಆಗ ಧೌಮ್ಯರ ಅಭಯೋಕ್ತಿ .... .... .... | 246 |
| ಕೃಷ್ಣ ಸಹಾಯನಾಗಿರಲು ಚಿಂತೆ ಬೇಡೆಂದು ಧೌಮ್ಯರ ವಾಕ್ಯ .... | ,, |
| ಧೃತರಾಷ್ಟ್ರನ ಅಪ್ಪಣೆಯಂತೆ ಧರ್ಮಾದಿಗಳು ಬರುವಿಕೆ .... | ,, |
| ಆಗ ಧೃತರಾಷ್ಟ್ರನ ಆದರ .... .... .... | 247 |
| ಶಕುನಿಮೊದಲಾದವರು ದ್ಯೂತಪ್ರಯತ್ನ ಮಾಡಿದುದು .... | ,, |
| ಆಗ ದುರ್ಯೋಧನನು ಪಾಂಡವರ ಸಭೆಯನ್ನು ಸ್ತುತಿಸಿದುದು .... | ,, |

| ವಿಷಯ | ಪುಟ |
|---|---|
| ಕೌರವಸಭೆಯ ವರ್ಣನೆ .... .... .... | 248 |
| ಧರ್ಮರಾಯನು ಸಭೆಯನ್ನು ಪ್ರವೇಶಿಸಿದುದು .... | 249 |
| ಆಗ ಆಸಭೆಯಲ್ಲಿದ್ದವರ ವರ್ಣನೆ .. .... | 250 |
| ದ್ಯೂತಕ್ಕೆ ಧರ್ಮರಾಯನನ್ನು ಕರೆಯುವಿಕೆ .... | ,, |
| ಕುಟಿಲರೊಡನೆ ಜೂಜು ಕೂಡದೆಂದು ಧರ್ಮರಾಯನ ಉತ್ತರ .... | ,, |
| ಬಂಧುಗಳಲ್ಲಿ ಭೇದಚಿಂತೆ ಏಕೆಂದು ದುರ್ಯೋಧನನ ಭಾಷಣ .... | 251 |
| ದ್ಯೂತವು ಯೋಗ್ಯವಲ್ಲೆಂದು ಧರ್ಮರಾಯನ ವಾಕ್ಯ .... | ,, |
| ಇದು ರಾಜರಿಗಾಗಿ ಹುಟ್ಟಿದ್ದು ಇದನ್ನೊಲ್ಲದವನು ಮೃಗವೆಂದು ದುರ್ಯೋಧನನ ನುಡಿ .... .... .... | ,, |
| ಶಕುನಿಯು ದ್ಯೂತಕ್ಕೋಸ್ಕರ ಧರ್ಮರಾಯನನ್ನು ಕರೆಯುವಿಕೆ .... | 252 |
| ಆಗ ಧರ್ಮರಾಯನು ದ್ಯೂತದಲ್ಲಿ ಮನವಮಾಡುವಿಕೆ ... | ,, |
| ಆಗ ನಾನಾವಿಧ ಅಪಶಕುನಗಳು .... .... | ,, |
| ದ್ಯೂತಾರಂಭ .... .... .... | 253 |
| ಶಕುನಿಯ ಸಂತೋಷ .... .... .... | 254 |
| ಶಕುನಿಯು ಜೂಜಿನಲ್ಲಿ ಧರ್ಮರಾಯನು ಒಡ್ಡಿದ ಪಣವನ್ನೊಂದೊಂದಾಗಿ ಗೆಲ್ಲುವಿಕೆ .... ... .... | ,, |
| ಧರ್ಮರಾಯನನ್ನು ಕುರಿತು ಶಕುನಿಯ ಬಿರುನುಡಿಗಳು ... | 265 |
| ಆಗ ಧರ್ಮರಾಯನ ಚಿಂತೆ .... .... .... | 266 |
| ಬಳಿಕ ನಕುಲಾದಿಗಳನ್ನು ಪಣವಾಗಿಡುವಿಕೆ .... | ,, |
| ದ್ರೌಪದಿಯನ್ನು ಪಣವಾಗಿಡುವಿಕೆ .... .... | 269 |
| ಬಳಿಕ ಧರ್ಮರಾಯನ ಚಿಂತೆ .... .... | 270 |
| ದುರ್ಯೋಧನಾದಿಗಳ ಸಂತೋಷ .... .... | ,, |
| ಶಕುನಿಯು ತನ್ನನ್ನು ಹೊಗಳಿಕೊಂಡುದು.... .... | 271 |
| ವಿದುರನ ಸುವಾಕ್ಯಗಳು .... .... .... | 273 |
| ದ್ರೌಪದಿಯ ಕರೆತರಲು ದುರ್ಯೋಧನನು ಪ್ರಾತಿಕಾಮಿಕನನ್ನು ಕಳುಹಿಸುವಿಕೆ .... .... .... | 274 |
| ಅವನು ದ್ರೌಪದಿಯ ಬಳಿ ಬಂದು ವಿಜ್ಞಾಪಿಸಿದುದು .... | 276 |
| ಸೋತ ಕ್ರಮವನ್ನು ವಿಚಾರಿಸಿದುದು .... .... | ,, |
| ಆಗ ದ್ರೌಪದಿಯು ಬರಲು ಒಪ್ಪದೇ ಹೋಗುವಿಕೆ .... | 277 |

| ವಿಷಯ | ಪುಟ |
|---|---|
| ಅವನು ಸಭೆಗೆ ಬಂದು ಆವರ್ತಮಾನವನ್ನು ಹೇಳುವಿಕೆ | 278 |
| ದುಶ್ಶಾಸನನನ್ನು ಕಳುಹಿಸುವಿಕೆ | ,, |
| ದ್ರೌಪದಿಯನ್ನು ಕುರಿತು ದುಶ್ಶಾಸನನ ಕ್ರೂರವಚನಗಳು | 279 |
| ದ್ರೌಪದಿಯನ್ನು ಸಭೆಗೆ ಕರೆತಂದುದು | 281 |
| ಆಗ ದ್ರೌಪದಿಯ ಅವಸ್ಥೆಯನ್ನು ನೋಡಿ ಸಭೆಗೆ ಶೋಕ | ,, |
| ಪಾಂಡವರ ಸೋಲನ್ನು ಅವರ ಮಕ್ಕಳು ಕೇಳಿದುದು | 283 |
| ಆಗ ಅವರು ಯುದ್ಧಕ್ಕಾಗಿ ಸಿದ್ಧರಾಗುವಿಕೆ | ,, |
| ಆಗ ಧರ್ಮರಾಯನ ಸಮಾಧಾನ | ,, |
| ದುರ್ಯೋಧನನ ಕ್ರೂರವಚನ | ,, |
| ದ್ರೌಪದಿಯು ಯುಕ್ತವನ್ನು ಹೇಳುವಿಕೆ | 284 |
| ದ್ರೌಪದಿಯನ್ನು ಕುರಿತು ಕರ್ಣನ ಕ್ರೂರವಚನ | ,, |
| ಶಕುನಿಯ ಬಿರುನುಡಿ | 285 |
| ಭೀಷ್ಮರ ವಾಕ್ಯ | ,, |
| ಆಗ ದುರ್ಯೋಧನನು ಭೀಷ್ಮಾದಿಗಳನ್ನು ಜರಿದುದು | 286 |
| ಭೀಮನ ಕೋಪ | ,, |
| ಅರ್ಜುನನ ಸಮಾಧಾನ | ,, |
| ಭೀಮನ ವಾಕ್ಯ | 287 |
| ದ್ರೌಪದಿಯು ಭೀಷ್ಮಾದಿಗಳನ್ನು ಕುರಿತು ಹೇಳುವಿಕೆ | ,, |
| ವಿಕರ್ಣನ ನೀತಿವಚನಗಳು | 288 |
| ಕರ್ಣನ ಅಧಿಕ್ಷೇಪವಾಕ್ಯ | 289 |
| ಅದಕ್ಕೆ ದುರ್ಯೋಧನನ ಅನುಮತಿ | ,, |
| ದುರ್ಯೋಧನನು ದುಶ್ಶಾಸನನನ್ನು ನಿಯಮಿಸುವಿಕೆ | 290 |
| ಧರ್ಮಾದಿಗಳು ತಮ್ಮ ಹಾರಾದಿಗಳನ್ನು ತೆಗೆಯುವಾಗ ದುಶ್ಶಾಸನನು ದ್ರೌಪದಿಯ ಸೆರಗನ್ನು ಹಿಡಿದುದು | ,, |
| ಆಗ ಭೀಷ್ಮಾದಿಗಳ ಕೋಪ | ,, |
| ಆಗ ದ್ರೌಪದಿಯು ಪತಿಗಳ ನೋಡಿದುದು | ,, |
| ಆಗ ಸಭೆಯಲ್ಲಿದ್ದವರನ್ನು ಬಿಡಿಸಿರೆಂದು ದ್ರೌಪದಿಯು ಕೇಳಿದುದು | 291 |
| ಆಗ ಶ್ರೀಕೃಷ್ಣನನ್ನು ಮರೆಹೊಕ್ಕುದು | 292 |
| ಕೃಷ್ಣಸ್ತುತಿ | ,, |

| ವಿಷಯ | ಪುಟ |
|---|---|
| ಶ್ರೀಕೃಷ್ಣನು ದ್ರೌಪದಿಯ ಅವಸ್ಥೆಯನ್ನು ತಿಳಿದು ಚಿಂತೆಯಿಂದಿರುವಿಕೆ | 298 |
| ಆಗ ಸತ್ಯಭಾಮೆಯೊಡನೆ ಆಟದಲ್ಲಿ ಅಕ್ಷಯವೆಂದು ಹಾಸಂಗಿಯನ್ನು ಹಾಕಿದುದು .... .... .... | ,, |
| ಶ್ರೀಕೃಷ್ಣನನ್ನು ಕುರಿತು ಸತ್ಯಭಾಮೆಯ ಪ್ರಶ್ನೆ .... | 299 |
| ಆಗ ಶ್ರೀಕೃಷ್ಣನು ದ್ರೌಪದಿಯ ಅವಸ್ಥೆಯನ್ನು ತಿಳಿಸಿದುದು .... | ,, |
| ಪಾಂಡವರಿಗೆ ಆದ ತೊಂದರೆಯನ್ನು ಶ್ರೀಕೃಷ್ಣನು ಹೇಳಿದುದು .... | 300 |

೧೬ ನೆಯ ಸಂಧಿ—

| | |
|---|---|
| ದುಶ್ಶಾಸನನು ದ್ರೌಪದಿಯ ಸೀರೆಯನ್ನು ಸೆಳೆಯುತ್ತಿರಲು ಅದು ಅಕ್ಷಯವಾದುದು .... .... .... | 302 |
| ಆಗ ವಿದುರನು ದುರ್ಯೋಧನನಿಗೆ ಬುದ್ಧಿಯನ್ನು ಹೇಳಿದುದು .... | 303 |
| ಆಗ ವಿದುರವಾಕ್ಯದಲ್ಲಿ ದುರ್ಯೋಧನನ ಉಪೇಕ್ಷೆ .... | ,, |
| ದುರ್ಯೋಧನನ ವಚನ .... .... .... | 305 |
| ಪಾಂಚಾಲಿಯ ವಿಷಯದಲ್ಲಿ ಕರ್ಣನ ಬಿರುನುಡಿಗಳು .... | ,, |
| ಆಗ ಪಾಂಚಾಲಿಯು ಕರ್ಣನನ್ನು ಧಿಕ್ಕರಿಸಿದುದು .... | ,, |
| ದುರ್ಯೋಧನನ ಸೊಕ್ಕಿನ ನುಡಿ .... .... | 306 |
| ಆಗ ಭೀಮನ ಕೋಪ .... .... .... | ,, |
| ಭೀಮನನ್ನು ಕುರಿತು ಧರ್ಮರಾಯನ ಸಮಾಧಾನ .... | ,, |
| ಅದಕ್ಕೆ ಅರ್ಜುನನ ಅನುಮತಿ .... .... | ,, |
| ದುರ್ಯೋಧನನ ಸ್ವಚ್ಛಂದಭಾಷಣ .... .... | 307 |
| ಆಗ ಕರ್ಣನ ಮಾತುಗಳು .... .... .... | ,, |
| ಆಗ ಕರ್ಣನನ್ನು ಸಮಾಧಾನಪಡಿಸಿ ದುಶ್ಶಾಸನನಿಗೆ ದುರ್ಯೋಧನನ ಅಪ್ಪಣೆ .... .... .... | 308 |
| ಆಗ ದ್ರೌಪದಿಯು ಭೀಷ್ಮಾದಿಗಳನ್ನು ಕೇಳಿಕೊಳ್ಳುವಿಕೆ .... | ,, |
| ಆಗ ವಿದುರನ ಮಾತುಗಳು .... .... .... | 310 |
| ಕೋಪದಿಂದ ಭೀಮನು ಎದ್ದುದು .... .... | ,, |
| ಆಗ ದುಶ್ಶಾಸನನು ದೂರಹೋದುದು .... .... | 311 |
| ಭೀಮನು ಕೋಪದಿಂದ ಬಿರುನುಡಿಗಳನಾಡಿ ಪಾಂಚಾಲಿಯನ್ನು ಸಮಾಧಾನ ಪಡಿಸಿದುದು .... .... .... | ,, |
| ಆಗ ಭೀಮನನ್ನು ಕುರಿತು ಅರ್ಜುನನ ಸಮಾಧಾನೋಕ್ತಿಗಳು .... | 312 |

| ವಿಷಯು | | | | ಪುಟ |
|---|---|---|---|---|
| ಭೀಮವಚನ | .... | .... | .... | 313 |
| ಆಗ ಬಹುವಿಧವಾಗಿ ಪಾಂಡವರು ಪ್ರತಿಜ್ಞೆಯನ್ನು ಮಾಡಿದುದು | | | .... | ,, |
| ಜನಗಳ ಅನುತಾಪ | .... | .... | .... | 315 |
| ಸುರರ ಅಭಿಪ್ರಾಯ | .... | .... | .... | ,, |
| ಆಗ ನಾನಾವಿಧ ಉತ್ಪಾತಗಳು | | .... | .... | ,, |
| ಧೃತರಾಷ್ಟ್ರನನ್ನು ಕುರಿತು ಭೀಷ್ಮವಾಕ್ಯ | | | .... | 316 |
| ವಿದುರನ ಮಾತು | .... | .... | .... | 317 |
| ದ್ರೌಪದಿಯನ್ನು ಕುರಿತು ಧೃತರಾಷ್ಟ್ರನ ಸಮಾಧಾನ | | | .... | ,, |
| ದ್ರೌಪದಿಯ ಉತ್ತರ | .... | .... | .... | ,, |
| ಧೃತರಾಷ್ಟ್ರನು ಬಹುವಿಧದಿಂದ ದ್ರೌಪದಿಯನ್ನು ಸಮಾಧಾನಪಡಿಸಿದುದು | | | | 318 |
| ವರಗಳ ಬೇಡೆಂದು ಧೃತರಾಷ್ಟ್ರನ ಅಪ್ಪಣೆ | | | .... | ,, |
| ವರಗಳನ್ನು ಪಡೆದುದು | .... | .... | .... | 319 |
| ದ್ರೌಪದಿಯನ್ನು ಕುರಿತು ಕರ್ಣನ ಮಾತು | | | .... | 320 |
| ಕರ್ಣನ ಮೇಲೆ ಭೀಮನ ಕೋಪ | | ... | .... | ,, |
| ಧರ್ಮರಾಯನ ಸಮಾಧಾನ... | | .... | .... | ,, |
| ಆಗ ಬಹುವಿಧವಾಗಿ ಪಾಂಡವರನ್ನು ಧೃತರಾಷ್ಟ್ರನು ಸಮಾಧಾನ ಪಡಿಸಿದುದು | .... | .... | .... | 321 |
| ಸತ್ಯಕ್ಕೆ ತಪ್ಪಿ ನಡೆಯುವುದಿಲ್ಲವೆಂದು ಧರ್ಮರಾಯನ ಉತ್ತರ | | | .... | 322 |
| ಪಾಂಡವರಿಗಾಗಿ ಧೃತರಾಷ್ಟ್ರನ ಉಪಚಾರ.... | | | .... | 323 |
| ದ್ರೌಪದಿಯನ್ನು ಕುರಿತು ಗಾಂಧಾರಿಯ ಸಮಾಧಾನ | | | .... | ,, |
| ಧೃತರಾಷ್ಟ್ರನ ಮಾತನ್ನು ನಂಬಿದುದು | .... | | .... | ,, |
| ೧೭ ನೆಯ ಸಂಧಿ— | | | | |
| ಪಾಂಡವರು ಈ ವರ್ತಮಾನವನ್ನು ಮಕ್ಕಳಿಗೆ ತಿಳಿಸಿದುದು | | | .... | 324 |
| ದುಶ್ಶಾಸನನು ದುರ್ಯೋಧನನ ಮುಂದೆ ಪಾಂಡವರು ತಮ್ಮ ಊರಿಗೆ ಹೊರಟದ್ದನ್ನು ತಿಳಿಸಿದುದು | .... | .... | .... | 325 |
| ಆಗ ಕರ್ಣನ ವಾಕ್ಯ | .... | .... | .... | ,, |
| ನಿಮ್ಮ ತಂದೆತಾಯಿಗಳನ್ನು ಮೊದಲು ಸರಿಮಾಡೆಂದು ಶಕುನಿಯ ಉಪದೇಶ | | | | 326 |
| ತಂದೆಯನ್ನು ಕುರಿತು ದುರ್ಯೋಧನನ ನಿಷ್ಠುರಭಾಷಣಗಳು | | | .... | 327 |
| ದುರ್ಯೋಧನನ ದೂಷಣೆ | .... | .... | .... | ,, |

| ವಿಷಯ | | ಪುಟ |
|---|---|---|
| ಪಾಂಡವರ ಗುಣಕಥನ | .... .... .... | 328 |
| ದುರ್ಯೋಧನನು ಕೋಪದಿಂದ ಹೊರಡುವಿಕೆ... | .... | ,, |
| ತಂದೆಯು ಮಗನನ್ನು ಪುನಃ ಕರೆಕಳುಹಿಸುವಿಕೆ | .... | ,, |
| ದುರ್ಯೋಧನನನ್ನು ಕುರಿತು ಸಮಾಧಾನ .... | .... | 329 |
| ಪಾಂಡವರ ವಿಷಯದಲ್ಲಿ ದುರ್ಯೋಧನನ ಅಭಿಪ್ರಾಯ | .... | ,, |
| ಅದಕ್ಕೆ ಧೃತರಾಷ್ಟ್ರನ ಅಂಗೀಕಾರ | .... .... | 330 |
| ಪಾಂಡವರನ್ನು ಕರೆಸಿ ಕೊಡೆಂದು ಮಗನು ಕೇಳಿದುದು | .... | ,, |
| ಅವರನ್ನು ಪ್ರಾತಿಕಾಮಿಕನಿಂದ ಕರೆಸುವುದು .... | .... | 331 |
| ಅದಕ್ಕೆ ಭೀಷ್ಮಾದಿಗಳ ಅನುತಾಪ | ... .... | ,, |
| ದೂತ ಬಂದ ಸಂಗತಿಯನ್ನು ಹೇಳಿದುದು | .... .... | 332 |
| ಭೀಮನ ಆಕ್ಷೇಪವಾಕ್ಯ | .... .... .... | 333 |
| ಸಮಾಧಾನದ ನುಡಿಗಳು | .... .... .... | ,, |
| ಆಗ ಜನಗಳ ಅಭಿಪ್ರಾಯ | .... .... .... | 334 |
| ಪಾಂಡವರು ಹಸ್ತಿನಾಪುರಕ್ಕೆ ಬಂದುದು | .... ... | 335 |
| ಪುರಪ್ರವೇಶ | ... .... .... | 336 |
| ಧೃತರಾಷ್ಟ್ರನ ಕ್ಷೇಮಾಲಿಂಗನಾದಿಗಳು | .... .... | ,, |
| ಮೃದುವಾಕ್ಯಗಳಿಂದ ಧರ್ಮರಾಜನಿಗೆ ದ್ಯೂತದಲ್ಲಿ ಬುದ್ಧಿಯನ್ನು ಹುಟ್ಟಿಸುವಿಕೆ | .... .... .... | 337 |
| ಧರ್ಮರಾಜನು ದ್ಯೂತವನ್ನೊಪ್ಪಿದುದು | .... .... | ,, |
| ಪಣನಿರ್ಣಯ | .... .... .... | ,, |
| ಜೂಜಿನಲ್ಲಿ ಧರ್ಮರಾಜನು ಸೋತದ್ದು | .... ... | 340 |
| ದ್ರೌಪದಿಯು ಧರ್ಮರಾಜನೊಡನಾದವರು ಮಾತನಾಡುವಿಕೆ | .... | 341 |
| ಭೀಮೋಕ್ತಿ | .... .... .... | 342 |
| ವನವಾಸಕ್ಕೋಸ್ಕರ ಪಾಂಡವರ ಪ್ರಯಾಣ | .... .... | 343 |
| ಪಾಂಡವರ ವಿಷಯದಲ್ಲಿ ಜನಗಳಿಗೆ ಇರುವ ಅಭಿಪ್ರಾಯ | .... | 344 |
| ಅಭಿಮನ್ಯುಮೊದಲಾದವರಿಗೆ ಪಾಂಡವರ ದರ್ಶನ.... | .... | 345 |
| ಸಮಸ್ತೈಶ್ವರ್ಯವನ್ನು ಕೌರವರಿಗೆ ಒಪ್ಪಿಸಿದುದು | .... | ,, |
| ಧೃತರಾಷ್ಟ್ರನು ಪಾಂಡವರ ಸ್ಥಿತಿಯನ್ನು ವಿದುರನಿಂದ ಕೇಳಿದುದು | .... | 347 |


---

ಶ್ರೀ

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

# ಸಭಾಪರ್ವ.

ತೃತೀಯ ಸಂಪುಟ

## ಒಂದನೆಯ ಸಂಧಿ

ಸೂಚನೆ

ಸಭೆಯೊಳೋಲಗದೊಳು ವಿರಿಂಚಿ
ಪ್ರಭವನನುಮತದಿಂದ ಧರಣೀ
ವಿಭು ಮಹಾಕ್ರತುರಾಜಸೂಯವನೊಲಿದು ಕೈಕೊಂಡ ||

ಖಾಂಡವವನದಹನಾನಂತರ ಪುರಪ್ರವೇಶ.

ಕೇಳು ಜನಮೇಜಯ ಧರಿತ್ರೀ
ಪಾಲ ಖಾಂಡವವನದ ವಹ್ನಿ
ಜ್ವಾಲೆ ತೆಗೆದುದು ಕೂಡೆ ಹೊಗೆದುವು ಹೊದಱ ಹೊಸಮಳೆಯ
ಮೇಲುಕಾಳಗದುಬ್ಬಿನಲಿ ಸಿರಿ
ಲೋಲ ಸಹಿತರ್ಜುನನು ವಿಕ್ರಮ
ದೇಳಿಗೆಯ ಪರಿತೋಷದಲಿ ಮರಳಿದನು [1] ಪಟ್ಟಣಕೆ ||

---

1 ತಿರುಗಿದನು, ಚ.

ದೂತರೈದಿದರಿವರ ಸೂಚಿಯ
ಕೈತವಕಿಗರು ಕೃತಕವಾರ್ತಾ
ಭೀತಪುರಜನಮುಖದ ಮುಗುಡದ ದಡ್ಡಿಗಳನುಗಿದು |
ಜೀತುಮಿಂದ್ರನ ಬಲುಹು ವಿಗಡನ
ವೀತಿಹೋತ್ರನ ವೀಗ ತಿದ್ದಿವಿ
ಧೂತರಿಪುಬಲ ಬಂದನಿದೆ ಯೆಂದರು ಮಹೀಪತಿಗೆ || ೨

ಪ್ರೀತುವರಸನ ಹರುಷಲತೆ ಪುರು
ಹೂತವಿಜಯದ ವಿಜಯವಾರ್ತಾ
ಶ್ರೋತ್ರಸುಖಸಂಪ್ರೀತಿ ನಯನಜಲಾಭಿಷೇಕದಲಿ |
ಮಾತು ಹಿಂಚಿತು ಮುಂಚಿದುದು ನಯ
ನಾತಿಥಿವ್ರಜ ಮುಸುಕಿತಸುರಾ [1]
ರಾತಿಪಾರ್ಥರ ಧರ್ಮಸುತಭೀಮಾದಿ [2] ಬಾಂಧವರ || ೩

ತಳಿತಗುಡಿಗಳ ಸಾಲಕಳಸದ
ಸಿಳಯುಸಿಳಯುವ ಬೀದಿಬೀದಿಯ
ತಳಿರ ತೋರಣದೋರಣದ ನವಮಕರತೋರಣದ |
ತಳಿಗೆವಂಬುಲವಾರತಿಯ ಪಾಂ
ಗಳಿಕರಭಸದ ಲಲಿತಲಾಜಾ
ವಳಿಗಳೊಸಗೆಯಲಿವರು ಹೊಕ್ಕರು ರಾಜಮಂದಿರವ || ೪

ಹಿರಿಯರಂಘ್ರಿದ್ವಯಕೆ ನಮಿಸಿದರು
ಕಿರಿಯರುಚಿತಕ್ಷೇಮಕುಶಲದಿ
ಪರಿರಚಿತಪರಿರಂಭಮಧುರವಚೋವಿಲಾಸದಲಿ |

1 ಮುಸುಕಿತಸುರಪಿ, ಖ. ಡ. ಚ.

2 ಘಾತಿಪಾರ್ಥರನನಿಲಸುತನಕುಲಾದಿ, ಖ. ಡ. ಚ.

ಅರಸನಿವರನು ಮನ್ನಿಸಿದನಾ
ದರಿಸಿತನ್ಯೋನ್ಯಾನುರಾಗ
ಸ್ಫುರಿತತೇಜೋಭಾವವಿಭ್ರಮಭೂಪತಿವ್ರಾತ ॥ ೫

ಶ್ರೀಕೃಷ್ಣನು ದ್ವಾರಕೆಗೆ ಹೊರಡುವಿಕೆ.

ಅರಸ ಕೇಳೈ ಬಳಿಕ ಹರಿ ನಿಜ
ಪುರಕೆ ಬಿಜಯಂಗೈವವಾರ್ತೆಯ
ನೊರೆದನವನೀಪತಿಗೆ ಭೀಮಧನಂಜಯಾದ್ಯರಿಗೆ ।
ಅರಸಿಯರಿಗಭಿಮನ್ಯುಧರ್ಮಜ
ನರವೃಕೋದರಸೂನುಮೊದಲಾ
ಗಿರೆ ಸಮಸ್ತಜನಂಗಳನು ಮನ್ನಿಸಿದನುಚಿತದಲಿ ॥ ೬

ವರಮುಹೂರ್ತದೊಳಮೃತಯೋಗೋ
ತ್ಕರಶುಭಗ್ರಹದೃಷ್ಟಿಯಲಿ ಹಿಮ
ಕರಸುಖಾ[1] ವಸ್ಥೆಯಲಿ ಕೇಂದ್ರಸ್ಥಾನಗುರುವಿನಲಿ ।
ಧರಣಿಸುರರಾಶೀರ್ವಚನವಿ
ಸ್ತರಣದಧಿದೂರ್ವಾಕ್ಷತೆಗಳು
ಬ್ಬರದ ವಾದ್ಯಘೋಷವಣೆಯಲಸುರಾರಿ ಹೊರವಂಟ ॥ ೭

ಕರಯುಗದ ಚಮ್ಮಟಿಕೆ ವಾಘೆಯ
ಲರಸ ರಥವೇರಿದನು ಮುಕ್ತಾ
ಭರದ ಭಾರಿಯ ಸತ್ತಿಗೆಯ ಪಲ್ಲವಿಸಿದನು ಭೀಮ ।
ಹರಿಯುಭಯಪಾರ್ಶ್ವದಲಿ ಸಿತಚಾ
ಮರವ ಚಿಮ್ಮಿದನರ್ಜುನನು ಬಂ
ಧುರದ ಹಡಪದ ಹೆಗಲಲಿಯ್ದಿದರರ್ಜುನಾನುಜರು ॥ ೮

ಪೌರಜನಪುರಜನನೃಪಾಲಕ
ಮೂರಸಚಿವಪಸಾಯ್ತಭಟಪರಿ
ವಾರಧೌಮ್ಯಪ್ರಮುಖಸೂರಿಸಮಾಜವೊಗ್ಗಿನಲಿ ।

1 ಶುಭಾ, ಚ. ಥ

ತೇರಬಚ್ಚಿವಿಡಿದೈದಿವರು ಮುರ
ವೈರಿವಿರಹವಿದೂನವೇದನಾಂ
ಭೋರುಹರ ಸಂತೈಸಿ ನುಡಿದನು ನಗುತ ಮುರವೈರಿ [1] ॥ ೯
ಅರಿನೃಪರು ಕುಹಕಿಗಳು ನೀವೇ
ಸರಸಹೃದಯರು ಧರ್ಮದೂರರು
ಪರರು ನೀವೇ ಧರ್ಮನಿಷ್ಠರು ಹಾನಿಯುಂಟವಕೆ ।
ಅರಸನಾರೋಗಣೆ ವಿಹಾರದೊ
ಳಿರುಳು ಹಗಲು ಮೃಗವ್ಯಸನದೆ
ಎಚ್ಚರಿನೊಳಿಹುದೆಂದಸುರರಿಪು ಬೀಳ್ಕೊಟ್ಟನಿನಿಬರನು ॥ ೧೦
ನಾಲಿಗೆಗಳಸುರಾರಿಗುಣನಾ
ಮಾಳಿಗಳ ಪೊಗಳುದುವು [2] ಕಂಗಳು
ನೀಲಮೇಘಶ್ಯಾಮನಲಿ ಬೆಚ್ಚವು ವಿಹಾರದಲಿ ।
ಬಾಲಕೇಳೀಕಥನಸುಧೆಯೊಳ
ಗಾಲಿ ಮುಳುಗಲು ಕಿವಿಗಳನಿಬರು
ಸಾಲಭಂಜಿಕೆಯಂದವಾದರು ಕೃಷ್ಣವಿರಹದಲಿ [3] ॥ ೧೧
ಕಳುಹಿ ಕಂಗಳು ಮರಳಿದುವು ಮನ
ಕಳುಹದಾದ್ವಾರಾವತಿಗೆ ಮುಂ
ಗಳಮಹೋತ್ಸವದೊಸಗೆನುಡಿಯಲಿ ಹೊಕ್ಕನಸುರಾರಿ ।
ಬಳಿಕಿವರು ನಿಜರಾಜಭವನ
ಸ್ಥಳಕೆ ಬಂದರು ಸೌಮನಸ್ಯದ
ಲೀಲೆಯ ಪಾಲಿಸುತಿರ್ದರವನೀಪಾಲ ಕೇಳೆಂದ ॥ ೧೨

**ಕೃಷ್ಣನ ಅಪ್ಪಣೆಯಂತೆ ಮಯನು ಸಭೆಯನ್ನು ನಿರ್ಮಾಣ ಮಾಡುವಿಕೆ.**

ಮುರಹರನ ನೇಮದಲಿ ಮಯ ವಿ
ಸ್ತರಿಸಿದನು ಹದಿನಾಲ್ಕು ತಿಂಗಳು

---
1 ಬೀಳ್ಕೊಟ್ಟನು ಕೃಪಾಜಲಧಿ, ಖ. ಡ. ಚ
2 ಪಾಳಿಯಲಿ ತುಳುಗಿದುವು, ಖ, ಡ, ಚ.
3 ಹೃದಯದಲಿ, ಖ,

ವರಸಭಾಮಂಟಪವನನಿಬರಿಗವ ವಿಚಿತ್ರದಲಿ [1] ।
ಕಿರಣಲಹರಿಯ ವಿವಿಧರತ್ನೋ
ತ್ಕರದ ರಚನಾಶಿಲ್ಪವಿದು ದೇ
ವರಿಗಸಾಧ್ಯವು ಶಿವಶಿವಾಯೆನೆ ಮೆಱೆದುದಾಸ್ಥಾನ ॥ ೧೩

ಹತ್ತುಸಾವಿರಕೈಪ್ರಮಾಣದ
ಸುತ್ತುವಳಯದ ಮಣಿಯ ಶಿಲೆಗಳ
ತತ್ತವಣೆಗಳ ತೆಕ್ಕೆವೆಳಗಿನ ಲಹರಿಗಳಲಳಿಯ [2] ।
ಸುತ್ತುವಳಯದ ಪದ್ಮರಾಗದ
ಭಿತ್ತಿಗಳ ವೈಡೂರ್ಯಶಿಲೆಗಳ
ಮೆತ್ತವಾರಣವರವಿಧಾನದಲೆಸೆದುದಾಸ್ಥಾನ ॥ ೧೪

ಕರೆಸಿದನು ಮಯನೆಂಟುಸಾವಿರ
ಸರಿಗರಕ್ಕಸಕಿಂಕರರ ನಿಜ
ಶಿರದೊಳಾಂತರು ತಂದರಿಂದ್ರಪ್ರಸ್ಥಪುರವರಕೆ ।

ಭೀಮಸೇನನಿಗೆ ಮಯನಿಂದ ಗದಾಪ್ರಾಪ್ತಿ.

ಅರಸ ಕಾಣಿಸಿಕೊಂಡವನನಾ
ದರಿಸಿದನು * ಭೀಮಂಗೆ ಭಾರಿಯ
ವರಗದಾದಂಡವನು ಕಾಣಿಕೆ ಯಿತ್ತು * ಪೊಡವಟ್ಟ ॥ ೧೫

† ಇದು ಸಗರಮಾಂಧಾತರಾಯನ
ಗದೆಯು ಲವಣಾಸುರನ ಸೀೞಿಯೆ
ಕದನದಲಿ ಶತ್ರುಘ್ನ ಕೊಂಡನು ಮೀನಕಾಚಲದಿ ।

---

1 ಕೃತಜ್ಞನಲ್ಲೇ, ಖ, ಚ. 2 ಪೊಳಗಿನ ಬೞಿಯ:ಲಹರಿಗಳ, ಡ

* ಭೀಮಾರ್ಜುನರಿಗಾ । ದರಗದಾಶಂಖವನು ಕಾಣಿಕೆ ಕೊಟ್ಟು, *

† ಇದು ಪುರಾತನಸಗರವಂಶಾ
ಭ್ಯುದಯದುರ್ಜಯಯೌವನಾಶ್ವನ
ಗದೆ ಕೃತಾಂತನ ಕರದ ದಂಡವನಂಡಲೆವ ಖಲದ ।

ಇದನಿರಿಸಿ ಕೊಂಡಿಂದ್ರನಿತ್ತನು
ಮುದದಿ ಗದೆಯನು ದೇವದತ್ತಾ
† ಖ್ಯದ ಮಹಾಶಂಖವನು ಪಾರ್ಥನ ಮೇಲಿನೊಲವಿನಲಿ ॥ ೧೬

ಒಸಗೆ ಮೆಱೆದುದು ಮಯನ ಮಿಗೆ ಮ
ನ್ನಿಸಿದನವನಿಪನಂಗಚಿತ್ತದೊ
ಳಸುರಕಿಂಕರರನಿಬರನ, ಸನ್ಮಾನದಾನದಲಿ ।
ಒಸೆದು ಕಳುಹಿದನಾತನನು ದೆಸೆ
ದೆಸೆಯ ಯಾಚಕನಿಕರ ನೂಕಿತು
ಮುಸುಕಿತೈ ಧರ್ಮಜನ ಕೀರ್ತಿಯು ರೂಢಿ ಮೂಜಗವ ॥ ೧೭

ಸುಮುಹೂರ್ತದಲ್ಲಿ ಮಹಾಸಭೆಯ ಪ್ರವೇಶ

ದಿವಸದಿವಸದೊಳುಂಡುವವಸಿ
ದ್ವಿಜಸಂತತಿ ಹತ್ತುಸಾವಿರ
ವವರನೇನೆಂದೆಣಿಸುವೆನು ಯಾಚಕ[1] ಮಹೋದಧಿಯು ।
ವಿವಿಧರತ್ನಾಭರಣಕಾಂಚನ
ನವದುಕೂಲದ ದಿಂಡಿನಲಿ ಬುಧ
ನಿವಹ ತಣಿದುದನಂತಕೃಪಣಾನಾಥಜನಸಹಿತ ॥ ೧೮

ಆಮಹೋತ್ಸವವೇೞುದಿನವಳಿ
ರಾಮರಂಜಿತವಾಯ್ತು ಶುಭದಿನ
ರಾಮಣೀಯಕಲಗ್ನದಲಿ ಹೊಕ್ಕನು ಮಹಾಸಭೆಯ ।
ಭೂಮಿಪಾಲರನಂತಸುಕವಿ
ಸ್ತೋಮವಸುಜರಮರ್ತ್ಯರೆನಿಪಸ
ನಾಮರಿರ್ದರುರಾಯನೆಡಬಲದಂಕವೀಧಿಯಲಿ ॥ ೧೯

† ಮುದದಲೊಪ್ಪುವುದೆನುತ ಮಯನತಿ
ಮುದದಿ ಬಳಿಕಾದೇವದತ್ತಾ
ಖ್ಯದ ಮಹಾಶಂಖವನು ಪಾರ್ಥಗೆ ಕೊಟ್ಟು ಕೈಮುಗಿದ, ॥ ಚ.

1 ಭೂಸುರ, ಖ. ಮಾರ್ಗಣ, ಚ,

ಹೊಳಹೊಳೆದುದಾಸ್ಥಾನ ಕಾಂತಾ
ವಳಿಯ ಕಂಗಳ ಬೆಳಗಿನಲಿ ತನಿ
ಮುಱುಗಿತೋಲಗ ಲಲಿತರಸಲಾವಣ್ಯಲಹರಿಯಲಿ ।
ವಿಲಸದಖಿಳಾಭರಣರತ್ನಾ
ವಳಿಯ ರಶ್ಮಿಯಲಡಿಗಡಿಗೆ ಪ್ರ
ಜ್ವಲಿಸಿತಾಸಭೆ ದೀಪ್ತಿಮಯವಿವಿಧಾನುಭಾವದಲಿ ॥ ೨೦

ಮೇಳದಲಿ ಗಂಧರ್ವರಿಪ್ಪ
ತ್ತೇೞು ತುಂಬುರುಸಹಿತ ಶುದ್ಧದ
ಸಾಳಗದ ಸಂಕೀರ್ಣದೇಸಿಯ ವಿವಿಧರಚನೆಯಲಿ ।
ಬಾಲೆಯರ ಸುರಗಣಿಕೆಯರ ಮುಖ
ಚಾಳೆಯರ ಸಂಗೀತತಾಳದ
ತೂಳುವರೆ ತುಂಬಿದುದು ಕುಸುಮಾಯುಧನ ಕಳಕಳವ ॥ ೨೧

ನಾರದರ ಆಗಮನ.

ಆಮಹಾಸಭೆಯಲಿ ಯುಧಿಷ್ಠಿರ
ಭೂಮಿಪತಿ ದೂರದಲಿ ಕಂಡನು
ತಾಮರಸದಳನಯನಸಂನಿಭಭಾವಭಾವಿತನ ।
ಹಾಮಹಾದೇವೆತ್ತಣದ್ಭುತ
ಧಾಮವಿದು ದಿನಮಣಿಯ ತೇಜ
ಸ್ತೋಮವೆರಡಱ ಸಾದುದೆನುತೀಕ್ಷಿಸಿದ ನಾಲ್ದೆಸೆಯ[1] ॥ ೨೨

ಲಲಿತತೇಜಃಪುಂಜ ಮಿಗೆ ಥಳ
ಥಳಿಸಿತತಿದೂರದಲಿ ಬೆಳಗಿನ
ಗೊಳಳಿ ಸುತ್ತದಂತಾದುದಾಗಲೆ ತೋಱಿತಾಕಾರ ।
ತಳಿತುದವಯವಶುದ್ಧವರ್ಣ
ಸ್ಥಳವು ನಿಮಿಷಕೆ ಮುನಿವರಾಕೃತಿ
ಹೊಳೆದುದಾಕ್ಷಣವೀತನಾರದನೆಂದುದಖಿಳಜನ ॥ ೨೩

[1] ರಾದೆಸೆಯ, ಚ. ಠ.

### ನಾರದರ ಗುಣವರ್ಣನೆ.

ದಣಿಯದಾತನ ಬೆರಳು ನಾರಾ
ಯಣರವದ ವೀಣೆಯಲಿ ಹೃದಯಾಂ
ಗಣದ ಬೀದಿಗೆ ಬಿಡಯವಾಗದು ಕೃಷ್ಣಪದ ಕೇಳಿ ।
ಪ್ರಣವರೂಪದ ಭಾವಶುದ್ಧಿಯ
ಕಣಿ ಮುರಾರಿಯ ತನ್ಮಯದ ಸ
ದ್ಗುಣಮುನಿಶ್ವರನಿಳಿದನಿಂದ್ರಪ್ರಸ್ಥಪುರವರಕೆ ॥ ೨೪

ಬಂದನೆರಮನೆಗಾಮುನಿಯನಭಿ
ವಂದಿಸಿದುದಾಸ್ಥಾನವಿದಿರಲಿ
ನಿಂದು ಬಿಜಯಂಗೈಸಿ ತಂದರು ಸಿಂಹವಿಷ್ಟರಕೆ ।
ಸಂದಮಧುಪರ್ಕಾದಿಸತ್ಕೃತಿ
ಯಿಂದ ಪೂಜಿಸಿ ವಿನಯದಲಿ ನಗು
ತೆಂದನವನೀಪಾಲನುಚಿತೋಕ್ತಿಯಲಿ ನಾರದನ ॥ ೨೫

### ನಾರದರ ಆಗಮನವನ್ನು ಅಭಿನಂದಿಸುವಿಕೆ.

ಕುಶಲವೇ ನಿಮ್ಮಂಘ್ರಿಗಳಿಗಿಂ
ದೊಸಗೆಯಾದುದು ನಿಮ್ಮ ದರ್ಶನ
ವಸಮಸಂಸ್ಕೃತಿವಹ್ನಿದಗ್ಧರಿಗಮೃತವರ್ಷವಲೆ ।
ಪಶುಪತಿಯ ಪರಮೇಷ್ಠಿಯ ಮುರ
ದ್ವಿಷನ ಸಾಮರ್ಥ್ಯದ ಸಗಾಢದ
ಎಸಕ ನಿಮಗುಂಟೆಂದು ಕೊಂಡಾಡಿದನು ನಾರದನ ॥ ೨೬

### ರಾಜನನ್ನು ಕುರಿತು ನಾರದರ ಕುಶಲ ಪ್ರಶ್ನೆ ಮತ್ತು ಧರ್ಮೋಪದೇಶ.

ಕುಶಲವೆಮಗಿಂದೈದೆ ನೀನೀ
ವಸುಮತೀವಧುಗೊಳ್ಳಿದನೆ ಶೋ
ಭಿಸುವುದೇ ಭವದಾಜ್ಞೆಯಲಿ ವರ್ಣಾಶ್ರಮಾಚಾರ ।

ದೆಸೆದೆಸೆಗಳಮಳಾಗ್ನಿ ಹೋತ್ರ
ಪ್ರಸರಧೂಮಧ್ವಜಗಳೇ ನಿಂ
ದಿಸರಲೇ ದುರ್ಜನರು ಸುಜನರನೆಂದನಾಮುನಿಪ ॥ ೧೭

ಅರ್ಥದಿಂ ಧರ್ಮವನು ಧರ್ಮದಿ
ನರ್ಥವನು ಧರ್ಮಾರ್ಥವೆರಡನು
ವ್ಯರ್ಥಕಾಮದಲಟ್ಟಿಯೊಲೇ ರಾಜ್ಯಾಭಿಲಾಷೆಯಲಿ ।
ಅರ್ಥಸಾಧನ ಧರ್ಮಸಾಧನ
ವರ್ಥಧರ್ಮದೊಳುಭಯಲೋಕಕ
ನರ್ಥಸಾಧನ ಕಾಮವೆಂದನು ಮುನಿ ನೃಪಾಲಂಗೆ ॥ ೧೮

ಮಾನ್ಯರನು ಧಿಕ್ಕರಿಸಿ ಯೆಲೆ ಯುವ
ಮಾನ್ಯರನು ಮನ್ನಿಸಿ ಯೆಲೇ ಸ
ನ್ಮಾನ್ಯರನು ಸತ್ಕರಿಸುವಾ ಹಳಿವಾವಿಕಾರಿಗಳ ।
ಅನ್ಯರನು ನಿನ್ನವರ ಮಾಡಿಯು
ನನ್ಯರನು ಬಾಹಿರರ ಮಾಡ ವ
ದಾನ್ಯರನು ನಿಗ್ರಹಿಸಿ ಯೆಲೆ ಭೂಪಾಲ ಕೇಳೆಂದ ॥ ೧೯

ಖಳರ ಖಂಡಿಸುವಾ ಮದವ್ಯಾ
ಕುಲರ ದಂಡಿಸುವಾ ದರಿದ್ರರ
ನೊಲಿದು ರಕ್ಷಿಸುವಾ ಸುಮಾಯಾವಿಗಳ ಶಿಕ್ಷಿಸುವೆ ।
ಕುಲಯುತರ ಕೊಂಡಾಡುವಾ ರಿಪು
ಬಲದ ತಲೆಚಂಡಾಡುವಾ ದು
ರ್ಬಲರನತಿಬಾಧಿಸಿ ಯೆಲೇ ಭೂಪಾಲ ಕೇಳೆಂದ ॥ ೨೦

ಜಾತಿಸಂಕರವಿಲ್ಲಲೇ ಜನ
ಜಾತದಲಿ ಹೀನೋತ್ತಮರು ನಿ
ರ್ನೀತರೇ ನಿಜಮಾರ್ಗದಲಿ ಕುಲವಿಹಿತಕರ್ಮ [1] ದಲಿ ।

---

1 ಧರ್ಮ, ಚ. ಠ.

ಖ್ಯಾತರೇ ಸತ್ಪುರುಷರಧಿಕ
ದ್ಯೂತಕೇಳಿಗಳಿಲ್ಲವೇ ಮೃಗ
ಯಾತಿರೇಕವ್ಯಸನ ಕಿರಿದೇ ರಾಯ ನಿನಗೆಂದ ॥ ೩೧

ಪರರು ಮಾಡಿದ ಸದ್ಗುಣಂಗಳ
ಮರೆಸುಲೇ ಪರರವಗುಣಂಗಳ
ಮರೆವು ಕಳವಾವನ್ಯರಿಗೆ ನೀ ಮಾಡಿದವಗುಣವೆ ।
ಮರೆಯದಿರು ನೀ ಮಾಡಿದುಚಿತವ
ಮರೆದು ಕಳವಾಚಾರವಿದು [1] ಸ
ತ್ಪುರುಷರಭಿಮತ ನಿನ್ನ ಮತವೇನೆಂದನಾಮುನಿಪ ॥ ೩೨

ಆರುಗುಣದೊಳುಪಾಯನಾಲ್ಕರೊ
ಳೇಳಿಹುದೆ ಮನ ರಾಜಧರ್ಮದ
ಮೂರುವರ್ಗದೊಳೆಚ್ಚರುಂಟೇ ನಯವಿಧಾನದಲಿ ।
ಮೂರುಶಕ್ತಿಗಳೊಳಗೆ ಮನ ಬೇ
ಸೂರಿಹುದೆ ಸಪ್ತಾಂಗದಲಿ ವೈ
ದೋಳಿಹೈ ಭೂಪಾಲ ಚಿತ್ತೈಸೆಂದನಾಮುನಿಪ [2] ॥ ೩೩

ಗಣನೆಯಿಲ್ಲಲೆ ನಿನಗೆ ಸಪ್ತ
ವ್ಯಸನದಲಿ ನಿನ್ನನುಜತನುಜರ
ಮಸುಡಧರ್ಮದಲಿರದಲೇ ವೈದಿಕವಿಧಾನದಲಿ ।
ಸಸಿನವೇ ನಿನ್ನ ಹಿತಪರರಿಗೆ
ಪಿಸುಣರಿಗೆ ವಂಚಕರಿ [3] ಗಜ್ಞರಿ
ಗುಸುರಿಯೊಳೆ ನಿನ್ನಂತರಂಗವನೆಂದನಾಮುನಿಪ ॥ ೩೪

ಪುರುಡಿಗರನೇಕಾಂತದೊಳಗಾ
ದರಿಸುವರು ಭೇದಕರ ಬುದ್ಧಿಗೆ
ತೆರಹುಗೊಡುವರು ಕುಟಿಲರಿಗೆ ವಿಶ್ವಾಸಹೀನರಿಗೆ ।

1 ಕಳವಿಯುಸಾರವಿದು, ಕ. ಜ. 2 ಬೇಸರೆಯೆಲೇ ಭೂಪಾಲ ನೀನೆಂದ, ಚ. ಶ.
3 ಹಸಿಕರಿಗೆ ಡಂಬುಕ, ಚ.

ಮರುಳುಗೊಂಬರು ಖೂಳರಿಗೆ ಭಂ
ಡರಿಗೆ ತೆರುವರು ಧನವನೀಧರೆ
ಯುರಸುಗಳಿಗಿದು ಸಹಜ ನಿನ್ನಂತಸ್ಥವೇನೆಂದ ॥ ೩೫

ಒಳಗೆ ಕುಜನರು ಹೊರಗೆ ಧರಣೀ
ವಳಯುಮಾನ್ಯರು ಛತ್ರಚಮರದ
ನೆಳಲು ಖೂಳಗಾತಪದ ಬಲು ಬೇಗೆ ಬುಧಜನಕೆ ।
ಒಳಗೆ ರಾಜದ್ರೋಹಿಗಳು ಹೊರ
ವಳಯುದಲಿ ಪತಿಕಾರ್ಯನಿಷ್ಠರು
ಬಳಸಿಹುದು ನೃಪಚರಿತ ನಿನ್ನಂತಸ್ಥವೇನೆಂದ ॥ ೩೬

ಪ್ರಜೆಗಳನುರಾಗಿಗಳೆ ಸುಭಟ
ವ್ರಜಕೆ ಜೀವಿತ ಸಂದಿಹುದೆ ವರ
ಸುಜನರಿಗೆ ಸಂತೋಷವೇ ಮಧುರೋಕ್ತಿರಚನೆಯಲಿ ।
ವಿಜಯಭೀಮರು ಯುಮಳರಿವರ
ಗ್ರಜರೊಳನುಜರಭಿನ್ನರೇ ಗಜ
ಬಜಿಕೆಯಂತಃಪುರದೊಳಿಲ್ಲವೆ ರಾಯ ಹೇಳೆಂದ ॥ ೩೭

ಖೂಳರೊಡನೆ ವಿನೋದ ಭಂಡರೊ
ಳಾಳಿ ಸ್ವಾಮಿದ್ರೋಹಿಯೊಡನೆ ಸ
ಮೇಳ ನಂಬುಗೆ ಡಂಭರೊಡನೆ ವಿಕಾರಿಯೊಡನಾಟ ।
ಸೂಳೆಯರು ಸಮಜೀವಿಗಳು ಕುಲ
ಬಾಲಕಿಯರೋಗಡಿಗೆಯವರು ನೃ
ಪಾಲಜನಕಿದು ಸಹಜ ನಿನ್ನಂತಸ್ಥವೇನೆಂದ ॥ ೩೮

ವಿಹಿತಕಾಲದ ಮೇಲೆ ಸಂಧಿಯ
ನಹಿತರೊಳು ವಿರಚಿಸುವ ಮೇಲ್ವಿ
ಗ್ರಹದ ಕಾಲಕೆ ವಿಗಡಿಸುವುದೆಂಬರ ಸುನೀತಿಯಲಿ ।

ವಿಹಿತವೇ ಮತಿ ವೈರಿರಾಯರ
ವಿಹರಣವೆನವರಾಳು ಕುದುರೆಯ
ಬಹಳತೆಯನಲ್ಪತೆಯನಱಿವೈ ರಾಯ ನೀನೆಂದ ‖ ೩೯

ನೆನೆದ ಮಂತ್ರವ ನಿನ್ನೊಳಾಳೋ
ಚನೆಯ ನಿಶ್ಚಯವಿಲ್ಲದಿರಲೊ
ಬ್ಬನಲಿ ಮೋಹ ಪಲಬರಲಿ ಜಡರಲಿ ಮತಿವಿಹೀನರಲಿ ।
ಮನಬರಡರಲಿ ಸಲೆ ವಿಧಾವಂ
ತನಲಿ ಮಂತ್ರಾಳೋಚನೆಯ ಸಂ
ಜನಿಸಿ ಪರಹಿನೊಳಚಿಯಲೇ ಭೂಪಾಲ ಕೇಳೆಂದ ‖ ೪೦

ಒಂದರಾಯಕೆ ಬೀಯ ಸರಿ ಮ
ತ್ತೊಂದು ಕಡೆಯಲಿ ಹೀನಫಲವಿ
ನ್ನೊಂದು ಕಾರ್ಯದುಪೇಕ್ಷೆತೆಗೆ ಕಡೆಯಿಲ್ಲ ಮೊದಲಿಲ್ಲ ।
ಒಂದು ಮರ್ಘಟ ದೈವಸಾಧಿತ
ವೊಂದು ಶಂಕಿತಫಲವೆನಿಪ್ಪವ
ಹಿಂದುಗಳವೈ ಮಂತ್ರದಲಿ ಭೂಪಾಲ ಕೇಳೆಂದ ‖ ೪೧

ಕಿಱಿದುಪೇಕ್ಷೆಯ ಬಹಳ ಫಲವೆನು
ಹೊಱವುದಿದು ಮೇಣಲ್ಪಭೇದಕೆ
ಮುಱಿವುದಿದು ವಿಕ್ರಮಕೆ ವಶವಿದು ನೀತಿಸಾಧ್ಯವಿದು ।
ಪರಿವುದಿದು ನಯಶಕ್ತಿಗೆಂಬುದ
ನಱಿದು ನಡೆವೈ ರಾಜಧರ್ಮದ
ಹೊರಿಗೆಯನು ಮಱೆದಿರೆಯೆಲೀ ಭೂಪಾಲ ಕೇಳೆಂದ ‖ ೪೨

ನುಡಿದೆರಡನಾಡದಿರು ಕಾರ್ಯವ
ಬಿಡದಿರಾವನೊಳಾದರೆಯು ನಗೆ
ನುಡಿಯ ಕುಂದದಿರೊಡೆಯದಿರು ಹೃದಯವನು ಕಪಟಿಯಲಿ ।

ಬಡವನವೆ ಮೊಡದಿರು ಮಾರ್ಗದೊ
ಳಡಿಯಿಡದಿರನುಜರೊಳೊ
ಗ್ಗೊಡೆಯದಿರು ನೃಪನೀತಿ ಯಿದು ಭೂಪಾಲ ಕೇಳೆಂದ ॥ ೪೩

ಆಯವಿಲ್ಲದ ಬೀಯವನು ಪೂ
ರಾಯವಿಲ್ಲದ ಘಾಯವನು ನಿ
ರ್ದಾಯವಿಲ್ಲದ ಮಂತ್ರವನು ಲೇಸಾಗಿ ಮಿಗೆ ರಚಿಸಿ ।
ನ್ಯಾಯವಿಲ್ಲದ ನಡವಳಿಯುಲ
ನ್ಯಾಯ ಹೊದ್ದುವ ಪಾಪವನು ನಿಜ
ಕಾಯದಲಿ ನೀ ಧರಿಸೆ ಯೆಲೆ ಭೂಪಾಲ ಕೇಳೆಂದ ॥ ೪೪

ಆವ ಕಾಲದೊಳಾವ ಕಾರ್ಯವ
ದಾವನಿಂದಹುದವನ ಮನ್ನಿಪ
ಠಾವಿದೆಂಬುದನಱಿದಿಹೈ ವ್ಯಗಜೀವಿಯುಂದದಲಿ ।
ಲಾವಕರ ನುಡಿಗೇಳಿ ನಡೆದರೆ
ಭೂವಳಯದೇಕಾಧಿಪತ್ಯದ
ಠಾವು ಕೆಡುವುದನಱಿದಿಹೈ ಭೂಪಾಲ ಕೇಳೆಂದ ॥ ೪೫

ಅರಸು ರಾಕ್ಷಸ ಮಂತ್ರಿಯೆಂಬುವ
ಮೊಱೆವ ಹುಲಿ ಪರಿವಾರ ಹದ್ದಿನ
ನೆರವಿ ಬಡವರ ಬಿನ್ನಪವ ನಿನ್ನಾರು ಕೇಳುವರು ।
ಉರಿವುರಿವುತಿದೆ ದೇಶನಾವಿ
ನ್ನಿರಲು ಬಾರೆವೆನುತ್ತ ಜನ ಬೇ
ಸರಿನ ಬೇಗೆಯುಲಿರದಲೇ ಭೂಪಾಲ ಕೇಳೆಂದ ॥ ೪೬

ಸರಳಲೆಚ್ಚರೆ ಹಗೆಯ ತಾಗವು
ದೞಿವುದೊಲೆವುದು ದೈವಗತಿಯುಲಿ
ನಿರುತಬುದ್ಧಿಯ ಬಾಣವನು ಕೊಟ್ಟೆಚ್ಚ ನರಿನೃಪರ ।

ಸಿರಿಯುನಾ ರಾಜ್ಯವನು ತತ್ಪರಿ
ಕರವ ಸಂಹರಿಸುವುದೆನಿಪ ಬಂ
ಧುರಧನುರ್ವಿದ್ಯಾಂಗ ವುಂಟೇ ರಾಯ ನಿನಗೆಂದ ॥ ೪೭

ಮಂತ್ರವುಳ್ಳವನವನೆ ಹಿರಿಯನು
ಮಂತ್ರವುಳ್ಳವನವನೆ ರಾಯನು
ಮಂತ್ರವುಳ್ಳವನವನೆ ಸಚಿವನಿಯೋಗಿ ಯೆನಿಸುವನು ।
ಮಂತ್ರವಿಲ್ಲದ ಬಱಿಯ ಬಲು ತಳ
ತಂತ್ರದಲಿ ಫಲವಿಲ್ಲವೈ ಸ್ವಾ
ತಂತ್ರ್ಯವೆನಿಸಲ್ಕಱಿವುದೇ ಭೂಪಾಲ ಕೇಳೆಂದ ॥ ೪೮

ಸೋತು ನುಡಿವಾಹಿರಿಯರಲಿ ಸಂ
ಪ್ರೀತಿಯನು ಸುಜನರಲಿ ನಿರ್ಮಲ
ನೀತಿಯನು ಪರಿವಾರಪುರಜನನಾಡಬೀಡಿನಲಿ ।
ಖ್ಯಾತಿಯನು ಧರ್ಮದಲಿ ವೈರಿ
ವ್ರಾತದಲಿ ಪೌರುಷವನಧಿಕ
ಜ್ಞಾನಿಗಳಲೆಚ್ಚರಿಕೆ ಯುಂಟೇ ರಾಯ ನಿನಗೆಂದ ॥ ೪೯

ಮೋಹದವಳಲಿ ವೈದ್ಯರಲಿ ವ್ಯಾ
ಗಾಹಿನವರಲಿ ಬಾಣಸಿಗರಲಿ
ಬೇಹಮಂತ್ರಿಗಳಲಿ ವಿಧಾವಂತರಲಿ ಹಿರಿಯರಲಿ ।
ಗೇಹ [1] ರಕ್ಷಕರಲಿ ಸಹೋದಕ
ವಾಹಿಯಲಿ ಹಡಪಾಳಿಯಲಿ ಪ್ರ
ತ್ಯೂಹವನು ವಿರಚಿಸೆ ಯೆಲೇ ಭೂಪಾಲ ಕೇಳೆಂದ ॥ ೫೦

ರಣಮುಖದೊಳಂಗನೆಯಲಾರೋ
ಗಣೆಯಲರಿಗಳ ಕೂಟದಲಿ ವಾ
ರಣತುರಗದೇಱಾಟದಲಿ ವಿವಿಧಾಯುಧಂಗಳಲಿ ।

1 ದೇಹ, ಚ.

ಎಣೆನೃಪರ ಸೋಂಕಿನಲಿ ಸೆಜ್ಜೆಯ
ಲಣಿಯ ಮಜ್ಜನದಲ್ಲಿ ಬಲುಮೃಗ
ಗಣನೆಯೊಳಗೆಚ್ಚರಿಕೆ ಯುಂಟೇ ರಾಯ ನಿನಗೆಂದ ॥ ೫೧

ತರುಣಿಯಲಿ ಹಗೆಗಳಲಿ ಬಹಳೈ
ಶ್ವರಿಯದಲಿ ಶಸ್ತ್ರಾಂಗಿಯಲಿ ಸಂ
ಸ್ತರಣದಲಿ ಮದ್ಯಪನಲಿ ಬಲಾರ್ಥಿಯಲಿ ಶೃಂಗಿಯಲಿ ।
ಉರಗನಲಿ ನದಿಯಲಿ ಸಖಿಯರಾ
ತುರಿಯದಲಿ ದುರ್ಮಂತ್ರಿಯಲಿ ದು
ಶ್ಚರಿತನಲಿ ವಿಶ್ವಾಸಿಸೆ ಯೆಲೆ ಭೂಪ ಕೇಳೆಂದ ॥ ೫೨

ಪರಿಜನಕೆ ದಯೆಯನು ವರಸ್ತ್ರೀ
ಯರಲಿ ಭೀತಿಯ ಹಗೆಗಳಲಿ ನಿ
ಷ್ಕರುಣತೆಯ ಬಡವರಲಿ ದಾನವದೈವಗುರುದ್ವಿಜರ ।
ಚರಣಸೇವೆಯಲಾರ್ತತೆಯ ಪಿಸು
ಣರ ನುಡಿಗಳಲಿ ಮೂರ್ಖತೆಯ ನೀ
ವಿರಚಿಸುವೆಯೋ ಬೇಸರುವೆಯೋ ಭೂಪ ಕೇಳೆಂದ ॥ ೫೩

ಭಜಿಸುವಾ ಭಕ್ತಿಯಲಿ ದೈವ
ದ್ವಿಜಗುರುಸ್ಥಾನವನು ದೇಶ
ಪ್ರಜೆಯನರ್ಥಾಗಮದ ಗಡಣೆಗೆ ಘಾಸಿ ಮಾಡಿಯಲೆ ।
ಕುಜನರಭಿಮತದುಗ್ರದಂಡ
ವ್ಯಜನದಲಿ ಜನಜಠರವಹ್ನಿಯ
ಸೃಜಿಸೆಯೆಲೆ ಭವದೀಯರಾಜ್ಯಸ್ಥಿತಿಯ ಹೇಳೆಂದ ॥ ೫೪

ಫಲವಹುದ ಕೆಡಲೀಯದಳಿ ಪರಿ
ಮಳವ ಕೊಂಬಂದದಲಿ ನೀನಾ
ಳ್ವಿಳೆಯ ಕರದರ್ಥವನು ತೆಗೆವೈ ಪ್ರಜೆಯ ನೋಯಿಸದೆ ।

ಹಲವು ಸಂಧಾನದಲಿ ಗುಣದಲಿ[1]
ಚಲಿಸದಿಪ್ಪಂದದಲಿ ರಾಜ್ಯವ
ನಿಲಿಸುವೆನುಪಮಮಂತ್ರಿಯುಂಟೇ ರಾಯ ನಿನಗೆಂದ ‖ ೫೫

ಸೂಕರನ ತುಂಬಿಯ ಮರಾಳನ
ಭೇಕವೈರಿಯ ಕಾರುರಗ ಕಪಿ
ಕೋಕಿಲನ ಬರುಹಿಯ ಸುಧಾಕಿರಣನ ದಿನಾಧಿಪನ ।
ಆಕಸದ ದರ್ಪಣದ ಬಕರ
ತ್ನಾಕರನಲೊಂದೊಂದು ಗುಣವಿರ
ಬೇಕು ನೃಪರಿಗೆ ನಿನ್ನೊಳುಂಟೇ ರಾಯ ಹೇಳೆಂದ ‖ ೫೬

ಮೇಲನಱಿಯದ ನೃಪನ ಬಾಳಿಕೆ
ಗಾಳಗೊಡ್ಡಿದ ಸೊಡರು ನೀರದ
ಜಾಲದೊಡ್ಡಣೆ ಸುರಧನುವಿನಾಕಾರ ಶವದುಡಿಗೆ ।
ಬಾಳಗೌತಿದ ಕೊರಲು ಭುಜಗನ
ಹೇಳಿಗೆಯಲಿಕ್ಕಿದ ಕರವು ಬೆ
ಳ್ಳಾರಹಬ್ಬುಗೆಯವನ ಸಿರಿ ಭೂಪಾಲ ಕೇಳೆಂದ ‖ ೫೭

ನೆಚ್ಚದಿರು ಸಿರಿಯನು ವೃಥಾ ಮದ
ಗಿಚ್ಚಿನುರಿಯಲಿ ಬೇಯದಿರು ಮಿಗೆ
ಬೆಚ್ಚಿ ಬೆದಱದಿರೆಡರಿನಲಿ ಸತ್ಯವನು ಚಲಿಸದಿರು ।
ಮುಚ್ಚದಿರು ಸತ್ವವನು ಹೃದಯವ
ಬಿಚ್ಚದಿರು[2] ಯುಪಕೀರ್ತಿನಾರಿಯ
ಮೆಚ್ಚದಿರು ಮರುಳಾಗದಿರು ಭೂಪಾಲ ಕೇಳೆಂದ ‖ ೫೮

ನೀತಿವಿಡಿದರಸಿಂಗೆ ಬಹಳ
ಖ್ಯಾತಿಯಿಂ ಜನರಾಗ ರಾಗ
ವ್ರಾತದಿಂ ಧನ ಧನದಿ ಪರಿಕರ ಪರಿಕರದಿ ಜಯವು ।

---

[1] ಸನ್ಮಾನದಲಿ ನಯದಲಿ, ಚ.

[2] ಮೆಚ್ಚದಿರಸತ್ಯವನು ಗುಣವನು ಮುಚ್ಚದಿರು, ಚ. ತ.

ಆತಜಯದಿಂ ಧರ್ಮ ಧರ್ಮಸ
ಮೇತದಿಂ ಸುರತುಷ್ಟಿ ತುಷ್ಟಿಯ
ನೀತಿಯಿಂದಿಹಪರವ ಗೆಲುವೈ ರಾಯ ನೀನೆಂದ ॥ ೪೯

ಆವನಾಗಲಿ ಬೇಡಿದಂಗೊಲಿ
ದೀವುದೈ ನೃಪಧರ್ಮ ಹಗೆ ಕಲಿ
ಯಾವನಾಗಲಿ ಸೆಣಸಿದರೆ ಕಾದುವುದೆ ನೃಪನೀತಿ ।
ಆವನಾಗಲಿ ಶರಣುಹೊಕ್ಕನ
ಕಾವುದೇ ಕ್ಷತ್ರಿಯರ ಮತ ನೀ
ನಾವುದುಚಿತವನರಿದಿಹೈ ಭೂಪಾಲ ಕೇಳೆಂದ ॥ ೬೦

ಮನ್ನಣೆಯನಲ್ಪತೆಯ ನುಡಿಯೊಳ
ಗುನ್ನತೆಯನೆಸಗುವುದು [1] ಪರರಿಗೆ
ತನ್ನವರಿಗುಗ್ಗಡದ ಪತಿಕಾರ್ಯವನು [2] ಮಾತಿನಲಿ ।
ಭಿನ್ನವನು ತೋರುವುದು ರಾಯರ
ಗನ್ನಗತಕ ಕಣಾ ನಿಪುಣಸಂ
ಪನ್ನಮತಿ ನಿನಗುಂಟೆ ಭೂಮಿಪಾಲ ಹೇಳೆಂದ ॥ ೬೧

ಸತ್ಯವುಳ್ಳರೆ ಧರಣಿ ಸಾರುಗು
ಸತ್ಯವುಳ್ಳರೆ ಪದವಿ ಸಾರುಗು
ಸತ್ಯವುಳ್ಳರೆ ಸಕಲದೇಶದ ವೀರಸಿರಿ ಸಾರ್ಗು ।
ಸತ್ಯ ಬೇಹುದು ನೃಪರಿಗಾ
ಸತ್ಯ ಭುಜಬಲಗೂಡಿ ಮಂತ್ರದ
ಸತ್ಯವೇ ಸತ್ವಾಧಿಕವು ಭೂಪಾಲ ಕೇಳೆಂದ ॥ ೬೨

ಗುರುವಿರೋಧ ಮಹೀಸುರರ ಮಾ
ತ್ಸರಿಯ ಬಂಧುದ್ವೇಷ ಗುಣಸಂ
ಹರಣ ದೈವದ್ರೋಹ ಮತ್ಯಾಲೀಢದೀನತನ ।

1 ನೆನಸುವುದು, ಚ. ಠ. 2 ಪರಿಕರಣವನು, ಚ. ಠ

ಶರಣಜನದಂಡಿತ್ವವೆಂಬಿವೆ
ನರವರಿಸದಂಗೈಪ ಭೂಪನ
ಸಿರಿಗೆ ಮೊಡುಗು ಕೇಡು ನಿಮಿಷಕೆ ಭೂಪ ಕೇಳೆಂದ ॥ ೬೩

ಪರಮಸಖನಾದೊಡೆಯು ಬಡವಾ
ದುರಿಯು ತಾನೇ ಕೆಡಿಸಿ ಕಳವುದು
ಮ-ುತನೆಂದರೆ ತನ್ನ ಸಾಹಸದಂತರವನಱಿದು ।
ಅರಿಗಳೇ ಕಿಂಕರರು ಕಿಂಕರ
ರರಿಗಳು ಹದನನಱಿದು ಸತ್ಯೋ
ತ್ಕರದಲವನಿಯನಾಳುವೈ ಭೂಪಾಲ ಕೇಳೆಂದ ॥ ೬೪

ಧನದಲುರುಧಾನ್ಯದಲಿ ನೆರೆದಿಂ
ಧನದಲುದಕದ ಹೆಚ್ಚುಗೆಯಲಂ
ಬಿನಲಿ ಯಂತ್ರ[1] ಘದಲಿ ಶಿಲ್ಪಿಗರಲಿ ಶಿಲಾ[1] ಳಿಯಲಿ ।
ವನವಳಯ ಕೋಟಾವಳಯುಚೀ
ವನವಳಯ ಗಿರಿವಳಯ ದುರ್ಗವೆ
ವೆನಿಪ ದುರ್ಗಾವಳಿ ಸಮಗ್ರವೆ ಭೂಪ ನಿನಗೆಂದ ॥ ೬೫

ಧನದಿ ಪಂಡಿತರಶ್ವತತಿಯೂ
ಧನದಿ ಧಾರುಣಿಮಾನ ಮೋಣಾ
ಧನದಿ ಕಾಂತೆಯರಖಿಳವಸ್ತುಗಳೈದೆ ಸೇಱುವುದು ।
ನೆನಹು ತೃಪ್ತಿ ಯೊಳ್ಳದದದಱಿಂ
ಧನವೆ ಸಾಧನ ವರಸಿಗಾಧನ
ವನಿತು ದೊರಕೊಳಲಿದಿರದಾರೈ ಧಾತ್ರಿಪತಿಗಳಲಿ ॥ ೬೬

ಖಡ್ಗಧಾರೆಯು ಮಘು ಮಹಾಹಿಯು
ಹೆಡೆಯ ಮಾಣಿಕ ವಜ್ರದಿಂ ಬಿಗಿ
ದೊಡಲಿಗೊಡ್ಡಿದ ಸುರಗಿ ಕಡು ಕೆರಳಿದ ಮೃಗಾಧಿಪನ ।

[1] ಶಸ್ತ್ರ, ಚ. ಠ.

ನಡುಗುಹೆಯೊಳಿಹ ಸುಧೆಯು ಘಟ ವೀ
ಪೊಡವಿಯೊಡೆತನ ಸದರವೇ ಕಡು
ಬಡವರಿಗೆ ದೊರೆಕೊಂಬುದೇ ಭೂಪಾಲ ಕೇಳೆಂದ ॥ ೧೭

ಮಗಗೆ ಮುನಿವನು ತಂದೆ ತಂದೆಗೆ
ಮಗ ಮುನಿವನೊಡಹುಟ್ಟಿದರು ಬಲು
ಹಗೆ ಕಣಾ ತಮ್ಮೊಳಗೆ ಭೂಪರ ಕುಲದ ವಿದ್ಯೆಯಿದು [1] ।
ಬಗೆಯೆ ನಿನ್ನೊಡಹುಟ್ಟಿದರು ಮಂ
ತ್ರಿಗಳೊಳಾಪ್ತರು ಭಿನ್ನರೇ ದಾ
ಯಿಗರೊಳಂತರ್ಭೇದವೇ ಭೂಪಾಲ ಕೇಳೆಂದ [2] ॥ ೧೮

ಕೇಳು ನೀ ರಾಜೇಂದ್ರ ಭಾವದೊ
ಳಾಲಿಸುವೊಡಾವೇಶ್ಯ ನಾರಿಯು
ರಾಳುಗೊಂಬರು ತಮ್ಮ ಚಿತ್ತದ ಬಯಕೆ ಯದು ಬೇಱೆ ।
ಸೋಲುವರು ತಾವಲ್ಲ ಪರರನು
ಸೋಲಿಸಿಯೆ ಹಿಮ್ಮೆಟ್ಟುವರು ಮನ
ವೇಱುಕವೆಲಾಗಿಹುದು ಸತಿಯರ ನಂಬಬೇಡೆಂದ ॥ ೧೯

ಬೆರಸಿದಂದದಲಿಹರು ಚಿತ್ತವ
ಕರಿಸುವರು ಮತ್ತೊಬ್ಬನಲಿ ನಿಜ
ದೆರಕವೆಂಬವೊಲಿಹರು ಬೇಱೊಂದೆಡೆಯಲೊಲವಿಹುದು ।
ಎರಡುಮನ ಪೆರಡೊಲವು ಚಿತ್ತದ
ಪರಿಯೆರಡು ಮೈಯೆರಡು ನಾರಿ
ಯರೆರಡನಲ್ಲದೆ ಬಗೆಯರವನೀಪಾಲ ಕೇಳೆಂದ ॥ ೨೦

ಮಡದಿಯರು ಲತೆಗಳು ಧರಾಧಿಪ
ರೆಡಬಲದಲಿದ್ದವರುಗಳನೊಡ
ಬಡುವರಲ್ಲದೆ ಕಾರ್ಯಗತಿಗಳ ಹೆಚ್ಚು ಕುಂದುಗಳ ।

1 ಭುಲ್ಲವಿದ್ಯಗಳಃ, ಕ. ಖ.  2 ಭೇದವುಂಟೇ ರಾಯ ನಿನಗೆಂದ, ಚ.

ಹಿಡಿವರಲ್ಲಿದು ಜಾತಿಧರ್ಮದ
ಗಡಣೆ ಯಿದನಱಿದೊಳಗೆ ಪರರಿಂ
ಗೊಡೆತನವ ನೀನೀಯೆ ಯೆಲೆ ಭೂಪಾಲ ಕೇಳೆಂದ ॥ ೭೧

ಎಲ್ಲಿ ಸುಲಲಿತವಿದ್ಯೆ ಬಹುಧನ
ವೆಲ್ಲಿ ಗಣಿಕಾನೀಕ ಮಣಿಗಣ
ವೆಲ್ಲಿ ಗಜಜಾತಾಶ್ವ ವೆಲ್ಲಿ ವರೂಥಸಂದೋಹ ।
ಎಲ್ಲಿ ಸುಭಟನಿಕಾಯ ನೆರೆದಿಹು
ದಲ್ಲಿ ತನ್ನಾಧೀನ ಮಾಡಲು
ಬಲ್ಲವನೆ ನರನಾಥನವನೀಪಾಲ ಕೇಳೆಂದ ॥ ೭೦

ಶೂರ ಧೀರನುದಾರ ಧರ್ಮೋ
ದ್ಧಾರ ವಿವಿಧವಿಚಾರ ಸುಜನಾ
ಧಾರ ರಿಪುಸಂಹಾರ ಚತುರೋಪಾಯಸಾಕಾರ ।
ಸಾರಮಂತ್ರವಿಚಾರ ಭುವನಾ
ಧಾರ ಸುಜನಸ್ವಾಮಿಕಾರ್ಯೋ
ದ್ಧಾರ [1] ನೆನಿಸುವ ಮಂತ್ರಿಯುಂಟೇ ರಾಯ ನಿನಗೆಂದ ॥ ೭೩

ಲಲಿತಶ್ರುತದೃಷ್ಟಾನುಮಾನಂ
ಗಳಲಿ ನಿಪುಣನ ನಿಶ್ಚಲನ ನಿ
ರ್ಮಲನ ರಾಗದ್ವೇಷರಹಿತನ ಬಹುಲಿಪಿಜ್ಞಕನ ।
ಹಲವುಬುದ್ಧಿಯನುಳ್ಳವನ ಕೈ
ಚಳಕಲಿಖಿತನ ವಾಚಕನ ಬಗೆ
ಗೊಳಿಸಿ ಕರಣಿಕಪತಿಯ ಮಾಡುವುದರಸ ಕೇಳೆಂದ ॥ ೭೪

ತುರಗಗಜಭಟರಳವಱಿವ ಸಂ
ಗರಮಹೋತ್ಸಾಹನ ಜಿತಶ್ರಮ
ನರನನಧಿಕನ ಭೇದಕನ ನಾನಾಯುಧಜ್ಞಕನ ।

---

1 ಯರ್ಗಾರ, ಚ. ತ.

ಭರಿತಧೈರ್ಯನ ನೀತಿವಿದ ಕಾ
ಹುರನುದಾರನನೂರ್ಧ್ವರೋಮನ
ನಿರದೆ ಸೇನಾಪತಿಯು ಮಾಡುವುದರಸ ಕೇಳೆಂದ ॥ ೨೪

ಮನವೆಚನಕಾಯದಲಿ ದಾತಾ
ರನ ಹಿತವನುಳ್ಳವನ ವಿನತನ
ವಿನುತವನಿತಾನತಮುಖನ ನಿಶ್ಚಲನ ತೋಷಕನ ।
ಮುನಿವವರ ಬುದ್ಧಿಗೆ ಸಿಲುಕದಾ
ಪ್ತನ ಸುಧರ್ಮಕಲಾಪ್ರವೀಣನ
ಜನಪ ಚಿತ್ತೈಸುವುದಲೈ ತಾಂಬೂಲಧಾರಕನ ॥ ೨೬

ಎಡಬಲವನಾರೈವುತೊಡೆಯನ
ಬಿಡದೆ ನೋಡುತ ಮಕ್ಷಿಕಂಗಳ
ಗಡಣವನು ಝಾಡಿಸುತ ಕೆಗಣ್ಣಿಕ್ಕಿ ಕೆಲಬಲನ ।
ಬಿಡದೆ ನೋಡುತ ಸ್ವಾಮಿಕಾರ್ಯಕೆ
ಕೆಡೆಯೆನಿಸದಾಹವದ ಸೇವೆಗೆ
ನೆಡೆಯುದವನೇ ಚಮರಧಾರಕನರಸ ಕೇಳೆಂದ ॥ ೨೭

ನಿಶಿತಪರಿಮಳದಿಂದಲಾವೋ
ದಿಸಿ ಸುಗಂಧದ್ರವ್ಯದಲಿ ಬಂ
ಧಿಸಿದ ಮುದ್ರೆಯು ಜೀವ ತನ್ನಯ ಜೀವನವದೆಂದು ।
ವಸುಮತೀಶ್ವರಗಿತ್ತು ತಾ ಭೋ
ಗಿಸದೆ ಬಳಸದೆ ಮುನಿವವರ ತೊಲ
ಗಿಸುವವನೆ ಪಾನೀಯಧಾರಕನರಸ ಕೇಳೆಂದ ॥ ೨೮

ಮಿಸುಪ ಮಣಿಗಣ ಲೋಹಕಾಂಚನ
ವಿಸರ ಭೇದವನಱಿವ ಕೊಟ್ಟುದ
ನೆಸಿಯುಲೀಯದೆ ತಾನು ಭಕ್ಷಿಸದಹಿನಿಧಾನವನು ।

ಬಸಿದು ಕಾದಿಪ್ಪಂತೆ ಕಾದಿಹ
ಪುಸಿಯುದಾಪ್ತನ ಬಹುಕುಟುಂಬಿ
ವ್ಯಸನವೃಕ್ಷನ ಮೋಹವಿದ್ದೈ ಭಂಡಾರರಕ್ಷಕನ ॥ ೭೯

ಪಲಿತಕಾಯಕುರೂಪಿಯನು ನಿ
ರ್ಮಲನ ಲೋಭಿಯ ಸಾವಧಾನಿಯ
ಸಲೆ ಜಿತೇಂದ್ರಿಯನಿಂಗಿತಾಕಾರಪ್ರಭೇದಕನ ।
ಮಲಿನನನು ಕಡುಕುಬ್ಜನನಬಲಾ
ವಳಿಯ ಸುಧಾನಕ್ಕೆ ನಿಲಿಸುವು
ದಿಳೆಯೊಳಗ್ಗದ ಜಾಣನವನೈ ಭೂಪ ಕೇಳೆಂದ ॥ ೮೦

ಧರೆಯ ವೈಸಿರಿಯಲ್ಲಿ [1] ಕುಲವೃ
ದ್ಧರನು ಹೀನಾಂಗರನಹಿಂಸಾ
ಪರತರನು ಜಾತ್ಯಂಧರನು [2] ಧನದಾಶೆಯುಳ್ಳವರ ।
ಅರಮನೆಯ ಸಂರಕ್ಷಣಾರ್ಥದೊ
ಳಿರಿಸಿದರೆ ಮಾನೋನ್ನತಿಗೆ ವಿ
ಸ್ತರಣವಹುದಿದನರಿದಿಹೈ ಭೂಪಾಲ ಕೇಳೆಂದ ॥ ೮೧

ಅರಸ ಕೇಳಂತಃಪುರವು ಕಾ
ತರಿಸುವುದದಾವಂಗವನ ಹಿಂ
ದಿರಿಸಲಾಗದು ಮುಂದೆ ಮಾನಸ್ಥಿತಿಗೆ ಭಯವಹುದು ।
ಹಿರಿದು ಭೀಭತ್ಸೆಯಲಿ ಹುದಗಿ
ರ್ದರನ ರಾಜದ್ವಾರವಂಗೀ
ಕರಿಸುವುದು ನೃಪನೀತಿ ಯಿದು ಭೂಪಾಲ ಕೇಳೆಂದ ॥ ೮೨

ಸತಿಯರೊಲುಮೆಯಲಿ ವಿಟರುಗಳನು
ಸತಿಯರ ಸ್ಥಿತಿಗತಿಗೆ ನೀನಂ
ದತಿಶಯೋಕ್ತಿಯ ನುಡಿವವರನರಮನೆಯ ಕಾಹಿಂಗೆ ।

---

1 ಜರೆನರೆಯವೈಸಿರಿಯ, ಚ. 2 ವಿಜ್ಞಾಪ್ತರ, ಕ. ಖ.

ಪತಿಕರಿಸಿದರೆ ಜಗವೆಱಿಯಲಾ
ಕ್ಷಿತಿಪನಭಿಮಾನವು ನಿರರ್ಥಕ
ಗತವಹುದು ನೀನಱಿದಿಹ್ಯೆ ಭೂಪಾಲ ಕೇಳೆಂದ ॥ ೧೩

ಪಿತೃಪಿತಾಮಹ ಸೂಪಶಾಸ್ತ್ರ
ಪ್ರತತಿಕೈಕರಣೆಗಳೊಳಧಿಕನ
ನತಿಶುಚಿಯನಸದೃಶನನಕ್ರೋಧಿಯನನಾಲಪನ ।
ಪತಿಹಿತನ ಷಡುರಸವಿಶೇಷಾ
ನ್ವಿತನ ನಿತರಾಲಯವಿದೂರನ
ಪತಿಕರಿಸುವುದು ಸೂಪಕಾಱತೆಗರಸ ಕೇಳೆಂದ ॥ ೧೪

ತಿಳಿದವನ ಮತಿಯುತನ [1] ಭಾಷಾ
ವಳಿಲಿಪಿಜ್ಞನ ಸಾಕ್ಷರಿಕಮಾಂ
ಡಳಿಕಸಾಮಂತರನಶೇಷರನಿಂಗಿತವನಱಿದು ।
ಸಲೆ ಕರವ ಕಳುಹಿಸುವ ನಿಲಿಸುವ [2]
ಬಲುಹನುಳ್ಳನ ಸುಕೃತದುಷ್ಕೃತ
ಫಲಿತಕಾರ್ಯನನಧಿಕಮಂತ್ರಿಯ ಮಾಳ್ಪುದೊಲವಿಂದ ॥ ೧೫

ಚಂಡನೀತಿಸ್ಥಾನ ಶೌಚೋ
ದ್ದಂಡಗರ್ಗಾಂಗಿರಸನಿಪುಣನ
ಪಂಡಿತಪ್ರಿಯಶಾಂತಿಪೌಷ್ಟಿಕಕರ್ಮಕೋವಿದನ ।
ಚಂಡದೈವಜ್ಞನನು ಪೂತಗುಣ
ಮಂಡಿತನ ಬಹುಶಾಸ್ತ್ರವಿದನನು
ಖಂಡಿತನ ಪುರೋಹಿತನ ಮಾಡುವುದು ಕೇಳೆಂದ ॥ ೧೬

ಘಾಯದಲಿ ಸಲೆ ಚೊಕ್ಕಯದಲು
ಪಾಯಕರದಂಡೆಯಲಿ ಲಗುಡೆಯ
ಲಾಯಿಯೊಳಗೆ ನವಾಯಿಬಿನ್ನಾಣದಲಿ ಬೇಸರದೆ ।

[1] ವಿದನ, ಚ. ಠ. [2] ಕಟ್ಟಿಸುವಕಳಚುವ, ಚ. ಠ.

ಸ್ಥಾಯಿಯಲಿ ಸಂಚರಿಯಲೀಯದ
ಳ್ಳಾಯಿಯಲಿ ಬಂಧದ ವಿನೋದದ
ಲಾಯತವನರಿದಿಹನೆ ಮಲ್ಲನು ರಾಯ ಕೇಳೆಂದ ॥ ೮೭

ಗುಳಿತವರ [1] ನೀಕ್ಷಿಸುತ ಬಟ್ಟೆಯ
ಮೆಳೆಮರಂಗಳ ಹೊಯ್ಲ ತಪ್ಪಿಸಿ
ನೆಳಲನಱಸುತ ವೇಗಗತಿ ಸಾಮಾನ್ಯಗತಿಗಳಲಿ ।
ಬಳವಿಡಿದು ಭೂಭುಜರ ಯಾನ
ಗಳೊಳಳುಕದೆ ದಗೆಯ ಸೈರಿಸಿ
ಬಳಸುವವನೇ ಛತ್ರಧಾರಕ ನರಸ ಕೇಳೆಂದ ॥ ೮೮

ಹರುಷದಲಿ ನಿಜಜನನಿ ಗರ್ಭವ
ಧರಿಸಿ ಕೊಂಡಾಡುವ ವೊಲುತ್ತಮ
ಪುರುಷನಂತರ್ಯಾಮಿಯನು ತಾಳ್ವಂತೆ ಭೂಭುಜರ ।
ಧರಿಸಿ ಸುಖಸಂಗತಿಗಳಲಿ ಸಂ
ಚರಿಸುತಾಳ್ದನ ಹಾನಿ ವೃದ್ಧಿಯ
ಲಿರಲು ವಾಹನಧಾರಿಗಳು ಭೂಪಾಲ ಕೇಳೆಂದ ॥ ೮೯

ಹಿಂದೆ ಮಾಡಿದ ಸುಕೃತಫಲವೈ
ತಂದು ಬೆರಸುವವೋಲು ನಾನಾ
ಛಂದದಾಪತ್ತಿನಲಿ ಹರಿ ನಿಜಭಕ್ತಸಂಗತಿಯ ।
ಮುಂದೆ ನಿಲುವವೊಲವನಿಪಾಲನ
ದಂದುಗದ ಹೊತ್ತಿನಲಿ ಗಜಪುಲಿ
ವೃಂದವನು ಟಾಕುವನೆ ವಾಹಕನರಸ ಕೇಳೆಂದ ॥ ೯೦

ಬೇಸರದೆ ಕಾಳೋರಗನನ
ಡ್ಡೈಸಿ ಕಟ್ಟುರುಹೆಗಳು ಮಿಗೆ ವೇ
ಡೈಸಿ ಕಡಿದಱಿಯಟ್ಟುವಂಪದಲಹಿತಬಲದೊಳಗೆ ।

1 ಕುಳಿತವರ, ಖ.

ಓಸರಿಸದೊಳಹೊಕ್ಕು ಸಮರವಿ
ಲಾಸವನು ನೆಱೆ ಮೆಱೆದು ಕೇಶಾ
ಕೇಶಿಯಲಿ ಹಿಡಿದಿಱಿವ [1] ವನೆ ಕಾಲಾಳು ಕೇಳೆಂದ ॥ ೯೧

ಬಿಟ್ಟ ಸೂಟಿಯಲರಿನೃಪರ ನೆಱೆ
ಯಟ್ಟಿ ಮೊದಲಿಸುತ್ತ ಮುಂದಣ
ಥಟ್ಟನೊಡೆಹಾಯ್ದು ಹಿತಬಲದೊಳಗಾನೆ ಮರಿಮರಿಸು ।
ಹೊಟ್ಟು [2] ಗುಟ್ಟುತ ಹೆಣವ ಸಾಲುಗ
ಳೊಟ್ಟೆ ಮೆಱೆಯಲು ಕಳನ ಚೌಕದ
ಲಟ್ಟಿಯಾಡಿಸಬಲ್ಲವನೆ ರಾವುತನು ಕೇಳೆಂದ ॥ ೯೨

ಹೆಬ್ಬಲವ ನೊಡೆತುೞಿದು ಧರಣಿಯ
ನಿಬ್ಬಗೆಯ ಮಾಡಿಸುತ ಗಜಹಯ
ದೊಬ್ಬುಳಿಯ ಹರೆಗಡಿದು ಕಾದಿಸುತಾನೆಗಳ ಮೇಲೆ ।
ಬೊಬ್ಬಿಱಿದು ಶರವಳಯ ಕಱೆವುತ
ಲಿಬ್ಬರದ [3] ಬವರದಲಿ ರಿಪುಗಳಿ
ಗುಬ್ಬಸವನೆಸಗುವನೆ ಜೋದನು ರಾಯ ಕೇಳೆಂದ ॥ ೯೩

ಕುದುರೆಗಳನಾರೈದು ರಥವನು
ಹದುಳಿಸುತ ಸಾರಥಿಯ ನೋಡುತ
ಲಿದಿರ ಮುಱಿವುತ ತನ್ನ ಕಾಯಿದುಕೊಳುತ ಕೆಲಬಲನ ।
ಸದೆದು ಮರಳುವ ಲಾಗುವೇಗದ
ಕದನಕಾಲಾನಳನವನು ತಾ
ಮೊದಲಿಗನಲೈ ರಥಿಕರಿಗೆ ಭೂಪಾಲ ಕೇಳೆಂದ ॥ ೯೪

ಧೊರೆಯ ಕಾಣುತ ವಂದಿಸುತಲಂ
ಕರಿಸುತಂತರಿಸುತ್ತ ಮಿಗೆ ಹ
ತ್ತಿರನೆನಿಸದತಿದೂರನೆನಿಸದೆ ಮಧ್ಯಗತನೆನಿಸಿ ।

---

1 ಲಹಿತನೃಪರನು, ಚ. 2 ಹಿಟ್ಟು, ಚ. 3 ಲಬ್ಬರಿಸಿ,

ಪರಿಪಡಿಯಲೋಲಗಿಸುತರಸನ
ಸಿರಿಮೊಗವನೀಕ್ಷಿಸುತ ಬೆಸಸಲು
ಕರಯುಗವನಾನುವನೆ ಸೇವಕನರಸ ಕೇಳೆಂದ ॥ ೯೫

* ಗ್ರಾಮಮೂರ್ಛನ ಸಂಚರಣೆಗಳ
ಸೀಮೆಯಲಿ ಸ ರಿ ಗ ಮ ಪ ದ ನಿ ಗಳ
ಸೀಮೆ ತಪ್ಪದೆ ಪರಣಭರಣದ ಹೊಂಪು ತಿರುಪುಗಳ ।
ಕೋಮಲಿತಶಾರೀರಹೃದಯದ
ರಾಮಣೀಯಕರಚನೆಗಳಲಿ ಸ
ನಾಮನೆನಿಸುವನವನೆ ಗಾಯಕನರಸ ಕೇಳೆಂದ ॥ ೯೬

ತಾಳಲಯಬೆಂಬಾಳಮಿಶ್ರದ
ಮೇಳವದು ತಾ ರಾಗ ಶುದ್ಧದ
ಸಾಳಗದ ಸಂಕೀರ್ಣದೇಸಿಯ ವಿವಿಧರಚನೆಗಳ ।
ಮೇಳವರಿ ಷಾಡವದ ಸಾಧನ
ದೇಟಿಗೆಯ ಸಂಪೂರ್ಣಮಾರ್ಗದ
ಸೂಚಿಗಳ ಲಯಮಾನವಱಿವವನವನೆ ಗಾಯಕನು ॥ ೯೭

ಗಳಿಸಿದರ್ಥವನೆರಡು ಭಾಗವ
ಸಲಿಸುವೈ ಕರಿತುರಗರಥಪಾ
ಯ್ದಳಿಕೆ ಧರ್ಮತ್ಯಾಗ ಭೋಗವ ಮಾಡಿ ಸುರತತಿಗೆ ।
ಕಳೆವ ಭಾಗದಲೊಂದು ಭಾಗವೆ
ನಿಲಿಸುವೈ ಭಂಡಾರದಲಿ ನೃಪ [1]
ತಿಲಕರಿಗೆ ಕರ್ತವ್ಯ [2] ವಿದು ಭೂಪಾಲ ಕೇಳೆಂದ ॥ ೯೮

---

* ಉನ್ನತನ ನಿರುಪಾಧಿಕನ ಸಂ । ಪೂರ್ಣದಕ್ಷನ ತನ್ನನನ್ಯರು । ಮನ್ನದನ ಪತಿಕಾರ್ಯನಿಷ್ಠನನಾಪ್ತಗುಪ್ತಕನ ॥ ಮನ್ನಣೆಗೆ ಬೆರೆಯುವನನತಿಶಯ । ನಿನ್ನ ಕಾರ್ಯವಿಶಾರದನನು । ಪನ್ನಪ್ರತಿಹಾರಕರು ಪುಟ್ಟೇ ರಾಯ ನಿನಗೆಂದ ॥ ಡ.

1 ಕೋಶನೀನೃಪ, ಡ. 2 ತಿಲಕರಂತಬುದ್ಧಿ, ಡ.

ಮಲಿವ ರಾಯರ ಬೆನ್ನ ಕಪ್ಪವ
ನಲಗಿನಲಿ ಕೊಂಡಾಂತ ಮನ್ನೆಯ
ಕುಲದ ತಲೆಚಂಡಾಡಿ ರಿಪುಗಳ ದುರ್ಗದಲಿ ತನ್ನ ।
ಬಲುಸಚಿವರನು ನಿಲಿಸಿ ತಾ ಪುರ
ದಲಿ ವಿನೋದದಲಿರುತ ಹರುಷದ
ಲಿಳೆಯ ಪಾಲಿಸುವವನೆ ರಾಯನು ಭೂಪ ಕೇಳೆಂದ ॥ ೯೯

ಬಂದು ಕಡೆಯಲಿ ದೞ ಮುೞಿದು ಮ
ತ್ತೊಂದು ದೆಸೆಯಲಿ ಮನ್ನೆಯರು ಕವಿ
ದೊಂದು ಕಡೆ ಸಮವಲ್ಲಿ ಮತ್ತೊಂದ [1] ಧಿಕಬಲವೆನಿಸಿ ।
ಬಂದು ಸಂತಾಪದಲಿ ಕಾಳಗ
ದಿಂದ ಪುರದಲಿ ನಿಂದು ಕರಿಕರಿ
ಗುಂದುವ ಕ್ಷಿತಿಪಾಲನೇ ಭೂಪಾಲ ಕೇಳೆಂದ ॥ ೧೦೦

ಬೆೞಸು ಘನತೃಣವಧಿಕಜಲನಿ
ರ್ಮಲವೆನಿಪ ಕಾಲದಲಿ ಪರಮಂ
ಡಲಕೆ ನಡೆವುದು ದುಷ್ಟಕಾಲದೆ ಹೀನನೆಂದೆನಿಸೆ ।
ಬಲವಹುದು ನಿಜದೞಕೆ ಬರಲಾ
ನೆಲಕೆ ಮುಟ್ಟಲು ವೈರಿಸೇನಾ
ವೞಯ ಘಾತಕೆ ದೊರಕುವುದು ಭೂಪಾಲ ಕೇಳೆಂದ ॥ ೧೦೧

ಆಣೆಗಪಜಯವಿಲ್ಲಲೇ ಕೀ
ಳಾಣಿ ಟಂಕದೊಳಿಲ್ಲಲೇ ನಿ
ತ್ರಾಣದಲಿ ಸಂಗರವ ಹೊಗೆಯಲೆ ಶೌರ್ಯಗರ್ವದಲಿ ।
ವಾಣಿಯನು ಚಿತ್ತದಲಿ ಧರ್ಮದ
ಲೂಣೆಯವನಹಿತರಲುಪೇಕ್ಷೆಯ
ಕೇಣವನು ದಾನದಲಿ ಮಾಡಲೆ ರಾಯ ಕೇಳೆಂದ ॥ ೧೦೨

---

1 ದೆಸೆಯಲಿ ಬಲದೊಳೊಂದನೆಯ, ಚ.

ಕಳವು ಹುಸಿ ಹಾದರ ವಿರೋಧ
ಸ್ಖಲಿತ ವಾರಡಿ ಬಂದಿ ವಱಿಮಱಿ
ಬೆಳುಗವತಿ ಪರಿಭವಣಿ ಡಾವರ [1] ಠಕ್ಕು ಡೊಳ್ಳಾಸ ।
ಪೞವು ವಂಚನೆ ಜಾತಿಸಂಕರ
ಕೊಲೆ ನಿರೋಧವು ವಿಕೃತವಮಾಯಾ
ವಳಗಳಂಬಿವು ನಿನ್ನೊಳಿಲ್ಲವೆ ರಾಯ ಹೇಳೆಂದ ॥ ೧೦೩

ಬಡವರನು ಬಲ್ಲಿದರು ಮದದಲಿ
ಕೆಡಿಸುವರು ರಾಜ್ಯದೊಳಗವದಿರ
ಮಡದಿಮಕ್ಕಳ ಕಣ್ಣನೀರಿನ್ನಾರ ತಾಗುವುದು ।
ಪೊಡವಿಗಧಿಪತಿ ನೀನು ಧೂರ್ತರ
ಬಡಿದು ಶಿಕ್ಷಿಸದಿದ್ದಡಾದೊಡೆ
ನಡವಳಗೆ ಕೇಡಹುದು ಕುಲದಲಿ ಕರಣಿಕರ ನಡುವೆ ॥ ೧೦೪

ವಿದ್ಯೆ ಸತ್ಕುಲ ಬಹುವಿವೇಕವು
ಬುದ್ಧಿ ಜಾಣುಮೆ ನುಡಿಯು ಸಡಗರ
ಶುದ್ಧಚಿತ್ತ ಸುಶೀಲ ಭುಜಬಲಭದ್ರನೆಂದೆನಿಪ ।
ಉದ್ದಗವು ಮೊದಲಾಗುಣಂಗಳ
ಲಿದ್ದು ಫಲವೇನರಸ ಭಾಗ್ಯದ
ಬುದ್ಧಿಹೊದ್ದದವ ನರನು ದರಿದ್ರಾಂಗನವನೆಂದ ॥ ೧೦೫

ಸಿರಿಗೆ ಕಂಟಕವಾದ ದೋಷವ
ನೊರೆವೆನಾಲಸ್ಯವನು ಭಯವನು
ಮಱವೆಯನು ಕೋಪವನು ನಿದ್ರೆಯ ದೀರ್ಘಸೂತ್ರತೆಯ ।
ಪರಿಹರಿಸಬಲ್ಲವನಿಪಾಲಂ
ಗೆರವೆನಿಸದೈಶ್ವರ್ಯವಹುದು
ವರೆಯೊಳವ ರಾಜೋತ್ತಮನು ಭೂಪಾಲ ಕೇಳೆಂದ ॥ ೧೦೬

1 ಯ.ನ್ಯಾಯಪರಿಭವ, ಚ.

ಕೃಷಿ ಮೊದಲು ಸರ್ವಕ್ಕೆ ಕೃಷಿಯಿಂ
ಪಸರಿಸುವುದಾಕೃಷಿಯನುದ್ಯೋ
ಗಿಸುವ ಜನವನು ಪಾಲಿಸುವುದಾಜನಪದದ ಜನದಿ ।
ವಸು ತೆರಳುವುದು ವಸುವಿನಿಂ ಸಾ
ಧಿಸುವುದೆಲ್ಲವ ಭೂಪರದಱಿಂ
ಕೃಷಿವಿಹೀನನ ದೇಶವದು ದುರ್ದೇಶ ಕೇಳೆಂದ ॥ ೧೦೭

ತಲೆಯ ಮೇಲಿಱಿದವನನೊಗ್ಗಿಸಿ
ಸಲಹುವರು ಪುರುಷಾರ್ಥಜೀವರ
ನಿಱಿಕೆಗಾಂಬರು ಸ್ವಾಮಿದ್ರೋಹರನೊಲಿದು ನಂಬುವರು ।
ತಿಳಿಯಲಿದು ಕ್ಷತ್ರಿಯರ ಸಹಜದ
ಬಳಕೆ ನೀನರಸಾಗಿ ನಿನ್ನಾಳು
ಮುಳಿವರಿಗೆ ನೀನೊಲಿಯೆ ಯೆಲೆ ಭೂಪಾಲ ಕೇಳೆಂದ ॥ ೧೦೮

ಹಲವು ವಿನಿಯೋಗದಲಿ ಸುದತಿಯ
ರೊಲುಮೆಯಲಿ ಸಕಲಾಂಗದಲಿ ನಿ
ಸ್ಖಲಿತನಿಜವನೆ ಧರಿಸುವಾಶ್ರಮವರ್ಣಭೇದದಲಿ ।
ಹಱವು ನಿನಗಾವಂಗದಲಿ ಬಳಿ
ಸಲಿಸದಲೆ ಪರತತ್ವದಲಿ ವೆ
ಗ್ಗಳಿಸದಲೆ ವೈರಾಗ್ಯ ಮತ ಭೂಪಾಲ ನಿನಗೆಂದ ॥ ೧೦೯

ಢಾಳರನು ಢವಳರನು [1] ಠಕ್ಕಿನ
ಠೌಳಿಕಾಱಱ ಕೃತಕಮಾಯಾ
ಜಾಲರನು ಕಾಹುರರನಂತರ್ದಾಹಕರ ಶಠರ ।
ಖೂಳರನು ಖಳರನು ವಿಕಾರಿಯ
ಜಾಳುನುಡಿಗಳ ಜಡಮತಿಯ ನೀ
ನಾಳಗೊಂಬೆಯೊ ಲಾಲಿಸುವೆಯೋ ರಾಯ ಹೇಟೆಂದ ॥ ೧೧೦

---

[1] ಡಾಳರನು, ಚ.

ನರಕಕರ್ಮವ ಮಾಡಿ ಇಹದೊಳು
ದುರಿತಭಾಜನರಾಗಿ ಕಡೆಯಲಿ
ಪರಕೆ ಬಾಹಿರರಾಗಿ ನಾನಾಯೋನಿಯೊಳು ಸುಳಿದು ।
ಹೊರಳುವರು ಕೆಲಕೆಲರು ಭೂಪರು
ಧರಿಸುವರಲ್ಲೆ ರಾಜಧರ್ಮದ
ಪೊಱೆಗೆಯನು ಮಱೆದಿರೆ ಯೆಲೇ ಭೂಪಾಲ ಕೇಳೆಂದ ॥ ೧೧೧

ನೃಗನ ಭರತನ ಮಂದ.ಮಾರನ
ಸಗರನ ಪುರೂರವಯಯಾತಿಯ
ಮಗನ ನಹುಷನ ಕಾರ್ತವೀರ್ಯನ ನಳನ ದಶರಥನ ।
ಪಗಲಿರುಳುವಲ್ಲಭರ ವಂಶದ
ವಿಗಡರಲಿ ಯಮಸೂನು ಸರಿಯೋ
ವಿಗಿಲೊ ಯೆನಿಸುವ ನೀತಿ [1] ಯುಂಟೇ ರಾಯ ನಿನಗೆಂದ ॥

ಆಮುನೀಂದ್ರನ ವಚನರಚನಾ
ತಾಮರಸಮಕರಂದಕೇಳಿಯ
ಲೀಮಹೀಶಮನೋಮಧುವ್ರತ ವುಬ್ಬಿತೊಲವಿನಲಿ ।
ರೋಮಪುಳಕದ ರುಚಿರಭಾವ
ಪ್ರೇಮಪೂರಿತಹರುಷರಸದು
ದ್ದಾಮನದಿಯೊಳು ಮುಳುಗಿ ಮೂಡಿದನರಸ ಕೇಳೆಂದ ॥ ೧೧೩

ನಾರದರಿಂದ ಮಾಡಲ್ಪಟ್ಟ ಧರ್ಮೋಪದೇಶದಿಂದ ತುಷ್ಟನಾಗಿ
ನಾರದರನ್ನು ಸ್ತುತಿಸುವಿಕೆ.

ಎಲೆ ಮುನಿಯೆ ನೀವ್ ರಚಿಸಿದೀನಿ [2]
ರ್ಮಲನೃಪಾಲಾನ್ವಯ [3] ಪ್ರಪಂಚವ
ಬಳಸುವೆನು ಕೆಲಕೆಲವನಿನ್ನುಱೆ ಬಳಸುವೆನು ಕೆಲವ ।

---

[1] ಕೀರ್ತಿ, ಡ. [2] ನೀ ಬೆಸಸಿದೀನಿ, ಡ. ರ್ಮಲದನೃಪನೀತಿ,

